ಯೆಹೂದ್ಯರ ಕಾಲಗಣನೆಯ ಪ್ರಕಾರ ಶುಕ್ರವಾರದ ರಾತ್ರಿ) ಆತನು ಶಿಷ್ಯರೊಂದಿಗೆ ತನ್ನ ಕೊನೆಯ ಪಸ್ಕ ಹಬ್ಬದ (Passover) ಊಟವನ್ನು ಉಂಡು ತೀರಿಸುತ್ತಲೆ ಯೂದನು ಅವರನ್ನು ಬಿಟ್ಟು ಹೊರಟು ಹೋದನು.

ತುಸು ಬಳಿಕಲೇ ಯೇಸು ಮಿಕ್ಕ ಶಿಷ್ಯರೊಂದಿಗೆ ಅಲ್ಲಿಂದ ಎದ್ದು ಇಪ್ಪೇ ಗುಡ್ಡವನ್ನೇರಿ ಗೆತ್ಸೆಮನೆ (Gethsemane) ಎಂಬ ತೋಟಕ್ಕೆ ಹೋಗಿ ನಾಳೆ ತನಗೆ ಅನುಭವಿಸಲಿಕ್ಕಿರುವ ಆ ಯಾತನೆಯನ್ನು ಪದೇ ಪದೇ ಮನಗಂಡು, ಆ ಬಗ್ಗೆ ಮನಸ್ಸು ಸಿದ್ಧವಾಗಿದೆಯಾದರೂ ದೇಹಕ್ಕೆ ಬಲ ಸಾಲದು ಎಂದು ಎದೆ ಗುಂದಿ, ತಂದೆಯೇ ಸಾಧ್ಯವಿದ್ದರೆ ಈ ಪಾತ್ರವನ್ನು ನನ್ನಿಂದ ತೊಲಗಿಸು! ಆದರೂ ನನ್ನ ಇಷ್ಟವಲ್ಲ; ನಿನ್ನ ಚಿತ್ತದಂತೆ ಆಗಲಿ! ಎಂದು ಪುನಃ ಪುನಃ ಪ್ರಾರ್ಥಿಸಿದನು. ಅಷ್ಟರೊಳಗೆ ಪ್ರಧಾನ ಯಾಜಕರೂ ಶಾಸ್ತ್ರಿಗಳೂ ಹಿರಿಯರೂ ಮುಂತಾದ ಆತನ ಹಗೆಯವರ ಕಡೆಯ ಓಲೆಕಾರರೇ ಮೊದಲಾದವರು ಪಂಜುಗಳನ್ನು ಎತ್ತಿಕೊಂಡಿರುವ ಒಂದು ಗುಂಪನ್ನೊಡಗೂಡಿ ಯೂದನು ಅಲ್ಲಿಗೆ ಬಂದು ಯೇಸುವನ್ನು ತೋರಿಸಿಕೊಡುವುದೆ ಅವರು ಆತನನ್ನು ಹಿಡಕೊಂಡು, ಮಹಾಯಾಜಕನಾದ ಕಾಯಫನ (Caiaphas) ಬಳಿಗೆ ಒಯ್ದರು. ಆತನು ಯೇಸುವನ್ನು ಅಪರಾಧಿ ಎಂದು ತೀರ್ಮಾನಿಸುತ್ತಲೆ ಅಲ್ಲಿ ನೆರೆದವರೆಲ್ಲರೂ ಈತನು ಮರಣದಂಡನೆಗೆ ಅರ್ಹನೆಂದು ಕೂಗು ಹಾಕಿದರು.

ಮಾರನೆಯ ದಿನ ಶುಕ್ರವಾರದ ಬೆಳಗಾಗುತ್ತಲೆ ಮಹಾಯಾಜಕರೂ ಶಾಸ್ತ್ರಿಗಳೂ ಹಿರಿಯ ಸಭಿಕರೂ ಕೂಡಿ ಯೇಸುವನ್ನು ರೋಮಾಯ ಕೈಸರನ (Caesar) ಪ್ರತಿನಿಧಿಯಾದ ಪಿಲಾತನ (Pilate) ಅರಮನೆಗೆ ಕೊಂಡೊಯ್ದು ತಾನು ಯೆಹೂದ್ಯರ ಅರಸನೆಂದು ಈತನು ಕೈಸರನನ್ನು ಎದುರಾಯಿಸುತ್ತಾನೆಂದು ದೂರಿತ್ತರು. ಪಿಲಾತನು ಯೇಸುವನ್ನು ನುಡಿಸಲಿಕ್ಕೆ ಎಷ್ಟು ಪ್ರಯತ್ನಿಸಿದರೂ, ಈತನು ಒಂದೆರಡು ಮಾತುಗಳಷ್ಟೇ ವಿನಾ ಹೆಚ್ಚು ಆಡಲೂ ಇಲ್ಲ. ಆ ಮಾತುಗಳ ಅರ್ಥ ಆತನಿಗೆ ಆಗಲೂ ಇಲ್ಲ. ಆಗ ಆತನು ಬೆರಗಾಗಿ, ಈತನಲ್ಲಿ ಯಾವ ತಪ್ಪನ್ನೂ ಕಾಣೆ, ಹೇಗೆ ತಾನೆ ಈತನಿಗೆ ಮರಣದಂಡವನ್ನು ವಿಧಿಸಲಿ? ಆದಲ್ಲದೆ ಈ ಪಸ್ಕ ಹಬ್ಬದ ನಿಮಿತ್ತ ಒಬ್ಬ ಬಂದಿಯನ್ನು ನಿಮಗೆ ಬಿಟ್ಟುಕೊಡುವ ವಾಡಿಕೆಯೂ ಉಂಟಷ್ಟೇ? ಯಾರನ್ನು ಬಿಡಲಿ? ಯೆಹೂದ್ಯರ ಅರಸನೆಂಬ ಈ ಯೇಸುವನ್ನೊ? ಅಥವಾ ದಂಗೆಕಾರನಾದ ಬರಬ್ಬನನ್ನೊ (Barabas)? ಎಂದು ಕೇಳಲು, ಕೂಡಿದ ಮಂದಿ ಎಲ್ಲಾ

ಬರಬ್ಬನನ್ನೇ ಬಿಟ್ಟುಬಿಡೆಂದು ಬೊಬ್ಬಿರಿದರು. ಹಾಗಾದರೆ ಯೇಸುವನ್ನು ಏನು ಮಾಡಲಿ? ಎಂದು ಆತನು ಹೇಳಿದ ಪ್ರತಿಮಾತಿಗೆ, ಅವನನ್ನು ಸಿಲುಬೆಗೆ ಹಾಕು! ಎಂದು ಅವರು ಮರಳಿಯೂ ಕೋಲಾಹಲಿಸಿದರು. ಅಷ್ಟರಲ್ಲಿ ಪಿಲಾತನ ಹೆಂಡತಿ, ನಮಗೆ ಬೇಡೀ ಸತ್ಪುರುಷನ ಗೊಡವೆ, ಈತನನ್ನು ಕುರಿತು ಇವತ್ತಿನ ಮುಂಜಾವದಲ್ಲಿ ನನಗೆ ಕನಸು ಬಿದ್ದು ನಾನು ಬಹಳ ತೊಂದರೆಪಟ್ಟಿರುವೆನೆಂದು ಆತನಿಗೆ ಹೇಳಿ ಕಳಿಸಿದಳು. ಮೊದಲೇ ಯೇಸು ನಿರಪರಾಧಿ, ಆತನನ್ನು ಬಿಟ್ಟುಬಿಡಬೇಕೆಂದು ಮನಸ್ಸಿದ್ದ ಪಿಲಾತನಿಗೆ ಆಗ ನಿಶ್ಚಯವು ಸಹಜವಾಗಿ ಇಮ್ಮಡಿಸಿದರೂ, ಆತನನ್ನು ಸಿಲುಬೆಗೆ ಹಾಕೆಂಬ ಜನರ ಬೊಬ್ಬಾಟವನ್ನು ಕೇಳಿ, ಹಾಗೂ ತಾನು ಆ ಮುಂಚೆ ಯೆಹೂದ್ಯರನ್ನು ಒಂದಲ್ಲ, ಎರಡಲ್ಲ, ಮೂರು ಸಲ ನೋಯಿಸಿದುದನ್ನೂ (ಟಿಪ್ಪಣಿ ೨೧). ಆ ಬಗ್ಗೆ ಅವರು ನೆಟ್ಟಗೆ ಕೈಸರ ತಿಬೇರಿಯನಿಗೆ (Tiberius, ಕ್ರಿ. ಶ. ೧೪–೩೭) ಮನವಿ ಮಾಡಿಕೊಂಡುದ್ದನ್ನೂ, ಅದಕ್ಕೆ ಪ್ರತ್ಯುತ್ತರವಾಗಿ ಅವರ ತಳ್ಳಿಗೆ ಹೋಗದಿರೆಂದು ಆತನು ತನ್ನನ್ನು ಎಚ್ಚರಿಸುದುದನ್ನೂ ನೆನವರಿಸಿ ಪಿಲಾತನಿಗ ಎದೆ ಕುಸಿದು, ಕೊನೆಗೆ ತನ್ನ ನೆಮ್ಮದಿಯೇ ಮೇಲೆಂದು ಬಗೆದು, ಆತನು ನೀರನ್ನು ತರಿಸಿ ಈತನ ಸಾವಿಗೆ ತಾನು ಹೊಣೆಯಲ್ಲ! ಎಂದು ತನ್ನ ಕೆಯ್ಗಳನ್ನು ತೊಳಕೊಳ್ಳುವುದೆ, ಅದಕ್ಕೆ ನಾವೂ ನಮ್ಮ ಮಕ್ಕಳೂ ಹೊಣೆ! ಎಂದು ನೆರವಿ ಅರಚಾಡಿತು. ಆಗ ಪಿಲಾತನು ಯೇಸುವಿಗೆ ಮರಣಾಜ್ಞೆಯನ್ನು ವಿಧಿಸಿ ಅವನನ್ನು ರಾಣುವೆಯವರಿಗೆ ಒಪ್ಪಿಸಿದನು.

ರಾಣುವೆಯವರು ಅವನಿಗೆ ಕೆಂಪು ಹಚ್ಚಡವನ್ನು ಹೊದಿಸಿ ತಲೆಯಲ್ಲಿ ಮುಳ್ಳಿನ ಕಿರೀಟವಿಟ್ಟು, ಬಲಗೈಯಲ್ಲಿ ಬೆತ್ತವಿತ್ತು, ಯೆಹೂದ್ಯರ ಅರಸನೇ ಸ್ವಸ್ತಿ! ಎಂದು ಅವನ ಮುಂದೆ ಮೊಣಕಾಲೂರಿ, ಅವನ ಮೇಲೆ ಉಗುಳಿ, ಆ ಬೆತ್ತದಿಂದ ಅವನನ್ನು ಹೊಡೆದು ಆಮೇಲೆ ಅವನ ಬಟ್ಟೆಯನ್ನೇ ಅವನಿಗೆ ತೊಡಿಸಿ, ಅವನನ್ನು ಸಿಲುಬೆಗೆ ಏರಿಸಲಿಕ್ಕೆ ಯೆರೂಸಲೇಮಿನ ಹೊರಗುಳ್ಳ ಗೊಲ್ಗೊಥಾ (Golgotha) ಎಂಬ ದಿನ್ನೆಗೆ ಕೊಂಡೊಯ್ದು ಅಂದೇ ಸಿಲುಬೆಗೆ ಇಕ್ಕಲಿದ್ದ ಕಳ್ಳರಿಬ್ಬರ ನಡುವೆ ಆ ಶುಕ್ರವಾರದ ನಡುಹಗಲಿನಲ್ಲಿ ಯೇಸುವನ್ನು ಸಿಲುಬೆಯಲ್ಲಿ ತೂಗಿಸಿದರು. ಹಾದುಹೋಗುವವರೂ ಯಾಜಕರೂ ಶಾಸ್ತ್ರಿಗಳೂ ಹಿರಿಯರೂ ಆತನಿಗೆ ಬಾಯಾರೆ ಕಟಕಿಯಾಡಿದರು. ಆದರೂ ಆತನು ಅವರನ್ನು ಮನಸಾರೆ ಕ್ಷಮಿಸಿದನು. ಆಗಳಿಂದ ೩ ತಾಸುಗಳ ತನಕ ಊರಲ್ಲೆಲ್ಲಾ ದಪ್ಪಾನೆ ಕತ್ತಲು ಕವಿಯಿತು. ಆಗ್ಗೆ ಯೇಸು, "ಎಲೀ ಎಲೀ ಲಮಾ ಸಬಖ್ಥಾನಿ?" (ದೇವರೇ ದೇವರೇ ಯಾಕೆ ನನ್ನ ಕೈ ಬಿಟ್ಟೆ? ಎಂದು ಕೂಗಿ),

ಕೊನೆಗೆ ತಂದೆಯೇ ನನ್ನ ಆತ್ಮವನ್ನು ನಿನಗೆ ಒಪ್ಪಿಸುತ್ತೇನೆ ಎಂದು ಪ್ರಾಣವನ್ನು ಬಿಟ್ಟನು. ಒಡನೆಯೇ ಭೂಮಿ ಅದುರಿತು. ಕಾವಲಿನ ರೋಮಿಾಯ ಶತಾಧಿಪತಿ ಅದನ್ನು ಕಂಡು, ಈತನು ನಿಶ್ಚಯವಾಗಿಯೂ ದೇವಕುವರನೇ ಸರಿ ಎಂದನು. ನೋಡ ಬಂದವರೆಲ್ಲ ಮಮ್ಮಲ ಮರುಗಿ ಬಬ್ಬೊಬ್ಬರೆ ಹಿಂದೆರಳಿದರು. ಮಗ್ದಲದ ಮರಿಯಯಾದರೆ ಅಲ್ಲಿಯೇ ತುಸು ದೂರದಲ್ಲಿ ಮತ್ತೂ ಇದ್ದುಕೊಂಡು ಸಿಲುಬೆಯಲ್ಲಿ ಕಣ್ಣು ಮುಚ್ಚಿದ ಆತನ ಮೋರೆಯನ್ನೇ ನಿಟ್ಟಿಸುತ್ತಿದ್ದಳು. ಹಾಗೆಯೇ ಹುಣ್ಣಿಮೆಯ ತಿಂಗಳು ಮೂಡಿತು.

ಸುವಾರ್ತೆಗಳಲ್ಲಿ ಯೇಸುವಿನ ೩೦ನೆಯ ವರ್ಷದಿಂದ ಆತನನ್ನು ಗಲ್ಲಿಗೆ ಹಾಕಿದವರೆಗಣ ಮಾತ್ರ ಕಥೆ ಇದೆ. ಆತನ ಧರ್ಮದೇಶನೆ ಒಟ್ಟಾರೆ ಎರಡೇ ವರ್ಷವೆಂದೂ, ಅಲ್ಲ ಐದೊ ಏಳೊ ವರ್ಷವೆಂದೂ, ಅಂದರೆ ಆತನ ಜೀವಮಾನ ೩೦ ವರ್ಷವೆಂದೂ, ಅಲ್ಲ ೩೫ ಅಥವಾ ೩೭ ವರ್ಷವೆಂದೂ ಊಹೆಗಳು ಭಿನ್ನವಾಗಿವೆ. ಆತನು ಹುಟ್ಟಿದ ವರ್ಷ ಇಂತಹದೇ ಎಂದೂ ಗೊತ್ತಿಲ್ಲ. ಆತನ ಮರಣದದಿನವಾವರೂ ಕ್ರಿ. ಶ. ೩೦ನೆಯ ಏಪ್ರಿಲ್ ೭ನೆಯ ತಾರೀಖು ಶುಕ್ರವಾರವೆಂದೂ, ೧ ಕ್ರಿ. ಶ. ೩೩ನೆಯ ಏಪ್ರಿಲ್ ಮೂರನೆಯ ತಾರೀಖು ಶುಕ್ರವಾರವೆಂದೂ, ೨ ಇತ್ಯಾದಿಬೇರೆ ಬೇರೆ ಅಭಿಪ್ರಾಯಗಳಿವೆ.

ಇನ್ನು ಈ ಕವಿತೆಯ ಛಂದಸ್ಸನ್ನು ಕುರಿತು ಕೊನೆಯದೊಂದು ಮಾತು. ಮೊದಲ ದೃಷ್ಟಿಗೆ ಇದನ್ನು ಷೇಕ್ಸ್‌ಪಿಯರ್ (Shakespeare), ಮಿಲ್ಟನ್ (Milton) ಮೊದಲಾದ ಆಂಗ್ಲ ಕವಿಗಳ ಕೃತಿಗಳಲ್ಲಿಯ 'ಸರಳ ರಗಳೆ' ಯಿಂದ (Blank verse) ಎತ್ತಿಕೊಂಡಿರುವಂತೆ ತೋರಬಹುದಾದರೂ. ಆ ಭಾವನೆ ಬರೇ ಹೋಲುವೆಯನ್ನು ಕುರಿತು ಮಾತ್ರ ಒಪ್ಪಬಹುದಲ್ಲದೆ ಇದರ ಜೀವಾಳವನ್ನು ಕುರಿತಲ್ಲ. ಏಕೆಂದರೆ ಆಂಗ್ಲ ಸರಳ ರಗಳೆಯ ಪ್ರತ್ಯೇಕ ಚರಣದಲ್ಲಿ ೨-೩ ಮಾತ್ರೆಗಳ ಗುರ್ವಂತವಾದ ೫ ಗಣಗಳ ಒಟ್ಟಾರೆ ೧೫ ಮಾತ್ರೆಗಳಿವೆ. ನಮ್ಮ ಛಂದಸ್ಸಿನಲ್ಲಾದರೆ ೫-೫ ಮಾತ್ರೆಗಳ ೪ ಗಣಗಳ ಒಟ್ಟಾರೆ ೨೦ ಮಾತ್ರೆಗಳಿವೆ. ಪ್ರತ್ಯೇಕ ಚರಣವೂ ಗುರ್ವಂತವಾಗಬೇಕೆಂಬ ನಿರ್ಬಂಧವೂ ಇಲ್ಲ. ಈಗ, ಕ್ರಿ.ಶ. ೯೪೨ರಲ್ಲಿ ರಚಿತವಾದ ಪಂಪನ ಆದಿಪುರಾಣದಲ್ಲಾದರೊ (VII. ೨೭ ಮತ್ತು ೨೮ನೆಯ ಪದ್ಯಗಳ ನಡುವೆ) ನಮ್ಮ ಛಂದಿಸ್ಸಿನೋಪಾದಿಯದೇ ಪ್ರತ್ಯೇಕ ಚರಣದಲ್ಲಿ ೫-೫ ಮಾತ್ರೆಗಳ ೪

---

Moffatt: *Everyman's Life of Jesus*: H. G. Wells: *A Short History of the World.*

2 Renan: *Life of Jesus.*

ಗಣಗಳುಳ್ಳ 'ಲಲಿತ ರಗಳೆ' ಇದೆ. ಅತಏವ ನಮ್ಮ ಛಂದಸ್ಸು ಪಂಪನ, ಅಥವಾ ಅವನಿಗೂ ಹಿಂದಣ, ಆ ಲಲಿತ ರಗಳೆಯದೇ ನೆಟ್ಟನೆಯ ಪುತ್ರಿಕೆ ಯಲ್ಲದೆ ಸರ್ವಥಾ ಆಂಗ್ಲ ಸರಳ ರಗಳೆಯ ಅನುಕರಣೆಯಲ್ಲ. ಈ ಕಾರಣ ನಮ್ಮ ಛಂದಸ್ಸನ್ನು ಲಲಿತ ರಗಳೆ ಎನ್ನಬಹುದೆಂಬವರೇನೋ ಸರಿಯೇ. ಆದರೆ ಅದಕ್ಕೂ ಇದಕ್ಕೂ ತಕ್ಕಷ್ಟು ವ್ಯತ್ಯಾಸವೂ ಇದೆ—ಅದರ ಪ್ರತ್ಯೇಕ ೨-೨ ಚರಣಗಳಲ್ಲಿ ದ್ವಿತೀಯಾಕ್ಷರ ಪ್ರಾಸವೂ ಇದೆ, ಅಂತ್ಯ ಪ್ರಾಸವೂ ಇದೆ ಯಾದರೆ, ಇದರಲ್ಲಿ ಅದಾವ ಕಟ್ಟೂ ಇಲ್ಲ, ನಿಟ್ಟೂ ಇಲ್ಲ; ಹೆಚ್ಚೇಕೆ? ಪಂಪಭಾರತದಲ್ಲಿರುವ ರಗಳೆಯಂತೆ (I. ೫೮; III. ೨೨; IV. ೧೦) ಪ್ರಾಸದ ತೊಂದರೆಯೇ ಇಲ್ಲ: ಹಾಗೂ ಆ ಲಲಿತ ರಗಳೆ ಹಾಗೆ ಪ್ರಾಸ ಬದ್ಧವಾದ ದ್ವಿಪದಿಗಳಿಂದ ಒಟ್ಟಯಿಸಿದೆಯಾದರೆ, ಇದರ ಒಂದೊಂದು ಖಂಡದಲ್ಲಿ ಇಂತಿಷ್ಟೇ ಚರಣಗಳು ಇರಬೇಕೆಂಬ ಆ ನಿಯಮವೂ ಇಲ್ಲ, ಎಷ್ಟೂ ಚರಣಗಳು ಇರಬಹುದು. ಹೀಗೆ ಇಷ್ಟಾದರೂ ಭೇದವಿದ್ದಿರುವಲ್ಲಿ ನಮ್ಮ ಛಂದಸ್ಸನ್ನು ಹೇಗೆ ತಾನೆ. ಲಲಿತ ರಗಳೆ ಅದರ ಮಾತೃಕೆಯೇ ಆದರೂ, ಅದರ ಹೆಸರಿನಿಂದ ಲಲಿತ ರಗಳೆ ಎನ್ನಬಹುದು? ಇದಕ್ಕೆ ಬೇರೆಯೇ ಹೆಸರಿಕ್ಕಬೇಡವೇ? ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಅದ ಸ್ನಾದರೋ, ಕನ್ನಡದ ಆಯಾ ಪ್ರಾಂತಗಳಲ್ಲಿ ಸಕಾರಣವೊ ಅಕಾರಣವೊ ಆದ ಆಯಾ ಕೆಲವು ಹೆಸರುಗಳಿಂದ ಈಗ ಸಾಕಷ್ಟು ರೂಢಿಸಿರುವ ಈ ಛಂದಸ್ಸಿನ ಪ್ರತಿ ಚರಣದಲ್ಲಿ ಮೇಲೆ ಹೇಳಿರುವಂತೆ ೫-೫ ಮಾತ್ರೆಗಳ ೪-೪ ಗಣಗಳೂ (ಪ್ರತಿ ಖಂಡದ ಕೊನೆಯ ಚರಣದ ಅಂತಿಮ ಗಣದಲ್ಲಿ ಮಾತ್ರ ವಿರಾಮದ ಬಗ್ಗೆ ತಾನೆ ಗುರ್ವಂತವಾದ ೪ ಮಾತ್ರೆಗಳೂ) ಇದ್ದು ಇದು ಝಂಪೆ ಎಂಬ ಲೋಕವಿಶ್ರುತವಾದ ತಾಳವನ್ನು ಇಷ್ಟು ಪ್ರತ್ಯಕ್ಷವಾಗಿ ಒಂದೇ ಒಂದು ಇಳಿಯಷ್ಟಾದರೂ ತಪ್ಪದೆ ಅನುಸರಿಸುವುದರಿಂದ ಈ ಛಂದಸ್ಸಿಗೆ ಝಂಪೆ ಎಂಬ ಅನ್ವರ್ಥನಾಮವೇ ನೇರಾಗಿ ಒಪ್ಪುತ್ತದೆ ಎಂದು ಯಥಾವತ್ತಾಗಿ ಇತ್ಯರ್ಥಿಸಬಹುದು. ಈ ಬಗ್ಗೆ ತ್ರಿಪುಡೆ ಎಂಬ ಹೆಸರುವಾಸಿಯಾದ ತಾಳಕ್ಕೆ ಒಡಗೂಡಿರುವುದರಿಂದ ತ್ರಿಪುಡೆ ಎಂದು ಹೆಸರಾದ ಛಂದಸ್ಸಿನ (ರಾಜಶೇಖರ ವಿಲಾಸ, XIII. ೧೨೧-೧೨೮) ಉದಾಹರಣೆಯ ಸಾಂಪ್ರ ದಾಯಿಕ ಬೆಂಬಲವೂ ಬೇಕಾದಷ್ಟಿದೆ. ಇತಿ ಶಮ್.

ಮಂಜೇಶ್ವರ
ಸರ್ವಜಿತ್ ಸಂ। ತುಲಸೀ ದ್ವಾದಶಿ
೨೩ ನವಂಬರ ೧೯೪೭

ಗೋವಿಂದ ಪೈ

# ಗೊಲ್ಗೊಥಾ

ಅಥವಾ

# ಯೇಸುವಿನ ಕಡೆಯ ದಿನ

ಕೋಳಿ ಮೂರನೆಯ ಬಾರಿ ಕೂಗಿ ಯೇಸುವ ಕೊಲ್ಲ
ಲೆಳಸಿದ ಯೆಹೂದ್ಯರ ಮನಸಾಕ್ಷಿಯೊಲು ಸುಮ್ಮ
ನಾಗೆ, ೧ಕಾಯಫನಕಟ ನಡಸಿದ ವಿಚಾರಣೆಯ
ಕಟ್ಟನೀತಿಗೆ ಹೇಸಿ ಬೆಳುಗದಿರನಿಳಿವೋಗೆ,
೨ಜಗದ ಪಾಪದ ಸಾಲವಿಂದು ಹರಿದಪುದೆಂದು

ಸಾರೆ ತಂಗಾಳಿ ಸುತ್ತಲು ತೀಡೆ, ದಿವಕಿಂದು
ದೇವಕುವರಂ ಮರಳಿ ಬಹನೆಂಬ ಗೆಲುವಿಂದ
ದೇವದೂತರೆ ಬಾರಿಸುವರೊ ಮಂಗಲವಾದ್ಯ
ವೆನಲು [1]ಮುಂಬಕ್ಕಿಗಳ ಮೇಳವಂ ಮೊಳಗಾಡೆ,
ಇಂದಿನೀ ದುರ್ದಿನವ ಮೂಡಿಸುವೆನೆಂತೆಂಬ

ಚಿಂತೆಯಿಂದಿನನಂದು ಮುಗಿಲ ಮುಸುಕಂ ತೊಟ್ಟು
ಮೊಗಮರೆಸೆ, ನೇಸರಂ ಸೆರೆಬಿಗಿದು ರಾತ್ರಿಗೊ
ಪ್ಪಿಸುವ ಮೋಡದ ಗಡಣದಂತೆ ಕೈಸೆರೆವಿಡಿದ
ಯೇಸುವಂ ೩ಕೈಸರನ ಪ್ರತಿನಿಧಿ ಪಿಲಾತನರ
ಮನೆಗೊಯ್ದು, ತಾವಿನ್ನು ೪ಪಸ್ಕಹಬ್ಬವನುಣದೆ

೫ರೋಮಕನ ಮನೆಹೊಗಲು ಮಡಿಗೆಡುವೆವೆಂದಳುಕಿ
ಹೊರಗೆ ರಾಜಾಂಗಣದೊಳಾ ಯೆಹೂದ್ಯರು ತಳುವಿ,
ರಾಜಭಟರಿಂ ತಮ್ಮ ಮನವಿಯಂ ದೊರೆಗರುಹೆ,
ದೊರೆಯಾತನಂ ನ್ಯಾಯವೇದಿಕೆಗೆ ತರವೇಳೆ,
೬ಗಬ್ಬಥಕೆ ಬಂದ ನ್ಯಾಯಾಧಿಕಾರಿಯ ಮುಂದೆ

---

[1]ಮುಂಬಕ್ಕಿಗಳು — ಸೂರ್ಯೋದಯವಾಗುವ ಮುಂಚೆ ಉಲಿವ ಹಕ್ಕಿಗಳು.

ಯೇಸುವಂ ನಿಲಿಸಲಿದೊ ಒಜ್ಞಾ ವೃಕ್ಷದ ಬಳಿಯೆ
ವೆಂಟಣಿಸಿ ಕುಳಿತದರ ಫಲವ ಮೆಲಲಾರದವ
[2]ಅಕ್ಕಜದೊಳೀಕ್ಷಿಸುವ ಲಹಳೆಯು ಹಾವೆನೆ, ಹೊನ್ನ
ಗದ್ದುಗೆಯನೇರಿ ಕುಳಿತಲ್ಲಿ ತನ್ನೆದುರಲ್ಲಿ
ನಿಂದ ಯೇಸುವ ನಿಟ್ಟಿಸಿದನಾ ಪಿಲಾತಂ.

ಏನರಿವನಾ ರಜೋಮತಿ ರೋಮಕಂ ತನ್ನ
ಮುಂದಿರುವ ಸತ್ತ್ವಮೂರ್ತಿಯ ಸತ್ತ್ವವನೊ? ಸತ್ಯ
ವಿಗ್ರಹನ ಸತ್ಯವನೊ? ನಿತ್ಯಸುಂದರನಾತ್ಮ
ಸೌಂದರ್ಯವನೊ? ಬಡವನೀತನೇನಕೆ ತನ್ನ
ಹುಟ್ಟು, ಬಡಗಿಯ ಕೆಲಸ ಬಿಟ್ಟು, ಹೊಸ ಧರ್ಮವಂ
[3]ಸಾರ್ವನೆಂದಿಂತಕಿಂಚನನಾಗಿ ದಿನಕೊಂದು
ಕೂಳಿಲ್ಲದಿಂತು ಕೃಶವಾಗಿರುವನೆಂದು ಕನಿ
ಕರಿಪನಲ್ಲದೆ, ದೇವಸುತನಿಂದ ಮೇಣನ್ಯ
ಶ್ರೀಮಂತನಿಲ್ಲ, ಬದುಕಿರುವಂದೆ ದೇವರಲಿ
ಸಾಯುಜ್ಯವಡೆಯೆ ಪಾತಕಿ ಮನವ ನೇರ್ವಡಿಸೆ
ಧ್ಯಾನೋಪವಾಸವಲ್ಲದೆ ಬೇರೆ ಪಥವಿಲ್ಲಗಂ
ವೆಂದು ಲೋಕಕೆ ಸಾರಲದನೆ ತಾನಾಚರಿಸಿ
ಬಡವಾದನಿವನೆಂದರಿವನೆಂತು ರೋಮಕಂ?
ಮನೆಮಾರು ಮೊಡಿ ನೆಮ್ಮದಿಯೂಗಿ ಬಾಳದಿಂ
ತಲೆವನೇತಕೆ ಬೆಸದರೊಡನೆ, ಹರೆಯವನೇಕೆ
ಮರಳಿನೊಂಟೆಯೊಲಿಂತು [4]ದುಂದುಗೆಡಿಸುವನೆಂದು
ಮನದಿ ಹೀಗಳೆವನಲ್ಲದೆ, ಲೋಕವಿವನ ಮನೆ,
ಲೋಕದುದ್ಧಾರಣವೆ ಮನೆವಾರ್ತೆ, ಪಾಪದಿಂ
ಪಾಪಿಗಳನೆತ್ತೆ ಬಾಳ್ವೆಯ ತೆತ್ತ ಬೆಸದರೀ
ತನ ಬಳಗವಿಳೆಯ ಹೇರಿದ ಭಾರ ಹೊರುವ ಸಂ
ಕಷ್ಟಗಳ ಮರುವ ದಾಂಟಿಸಿ ಪಾರಗಾಣಿಸುವ
[5]ಒಂಟಿ ಇವನೆಂದಾ ಪಿಲಾತನಕಟರಿವನೇಂ?

---

[2]ಅಕ್ಕಜ = ಆಶ್ಚರ್ಯ, ಅಸೂಯೆ. [3]ಆಕಿಂಚನ = ಬಡವ. [4]ದುಂದುಗೆಡಿಸು = ಹಾಳುಮಾಡು [5]ಒಂಟೆ = ಒಬ್ಬಂಟಿಗ.

ಇದೊ ೧೧ಯೆಹೂದ್ಯದೊಳಿರುವ ದೇಸಿ ಪರದೇಶಿಯ
ತನುಮನಧನಂಗಳಂ ಸೂರೆಗೊಂಡಕಟೊಂದು
ಕಣ್ಣ ಕೂಟಕೆ ದೊರೆಯದಾಕೆ, ತನ್ನೆನಿತೆನಿತೊ

[6]ಹೊನ್ನಂಬುಗಳಿಗೆ ಗುರಿವಡದಾಕೆ ರೋಮಾಯ
ಸಮ್ರಾಜನಿವಳನರಿಫೊಡೆನೆ ತನ್ನರ್ಧಾಂಗಿ
ಮಾಡಿಕೊಳುವಾಕೆ, ೧೧ಯೂದಾಯದ ೧೨ಹೆಲೇನಳೆನೆ,
ಕ್ಲಿಯೊಪಾತ್ರಳೆನೆ, ಮದನನೆಸೆದಿಹ ಜಗನ್ಮೋಹ
ನಾಸ್ತ್ರಮೆನೆ, ಪ್ರತ್ಯಕ್ಷ ರತಿಯೆನೆ ಜಸಂಬೆತ್ತ

೧೩ಮಗ್ದಲದ ಮರಿಯಳೀ ಯೇಸುವಿಗೆ ಮನಸೋತು
ತನ್ನದೆಲ್ಲವ ಬಿಟ್ಟು, ಬಡತನವನುಟ್ಟಿವನ
ಬೆಂಬಳಿಯ ತೊತ್ತಾಗಲಾವ ಭಾಗ್ಯವಿದೆಂದು
ತುಟಿಗಚ್ಚಿ ನಿಟ್ಟುಸಿರ ಬಿಟ್ಟನಲ್ಲದೆ, ಸುಖದ
ಮಿಗಿಮಿಗಿಲಿನಿಂದಾಕೆ ಬೆಂದು ಮನನೊಂದು ಭುಗಿ

ಭುಗಿಲ್ವ [7]ಕಾವರಕೆ [8]ದಾವರಿಸಿನ್ನು ಮರುಭೂಮಿಯ
ಹಕ್ಕಿಯೊಲು ನೀರಡಸಿ ಬಂದಿವನ ತಣ್ಣುಡಿಯ
ನೀಂಟುತೀ ನಿತ್ಯಜೀವನದ ಬುಗ್ಗೆಯ ಬುಡದಿ
ಗುಣಕೆ ನಲ್ಲನ ಪ್ರೇಮಧರ್ಮದಾಸ್ಯವನಾಂತು
ತಂಗಿರುವಳಾ ಮರಿಯಳೀ ಪವಿತ್ರ ಪ್ರೇಮ
ವಲ್ಲರಿಯ ಪಿಕವೆಂದು ಬಲ್ಲನೆ ಪಿಲಾತಂ ?

ಸಾಕೆನ್ನ ಮನಸೆ ನಮಗೇನಾತ್ಮತೃಪ್ತನಾ
ಶುಷ್ಕಹೃದಯನ ಬಗೆಯ ಗೊಡವೆ ? ನೀನೆಮ ನೋಡ
೧ಳಲೋಕದುರುಪಾಪವಂ ಹೊತ್ತು ಕುರಿಮರಿಯಂತೆ,
ಗಿಡುಗಗಳ ನಡುವೆ ತೊಡರಿದ ಕಪೋತಕದಂತೆ

ನಿಂದಿರುವ ಮನುಜಸುತನಾ ಜಗದ್ರಕ್ಷಕನ !
ನರತನುವನಾಂತು ಮೂವತ್ತೆರಡೆ ವಯಸಂತೆ,

---

6 ಹೊನ್ನಂಬು = ಚಿನ್ನದ ಬಾಣ, ಅಂದರೆ ಹಣ.
7 ಕಾವರ = ಮನಸ್ಸಿನ ಬೇಗೆ
8 ದಾವರಿಸಿ = ಬಾಯಾರಿ.

ಯೇಸುವಂ ನಿಲಿಸಲಿದೊ ಒಜ್ಞಾವೃಕ್ಷದ ಬಳಿಯೆ
ವೆಂಟಣಿಸಿ ಕುಳಿತದರ ಫಲವ ಮೆಲಲಾರದವ
[1]ನಕ್ಕಜದೊಳೀಕ್ಷಿಸುವ [2]ಹಳೆಯು ಹಾವೆನೆ, ಹೊನ್ನ
ಗದ್ದುಗೆಯನೇರಿ ಕುಳಿತಲ್ಲಿ ತನ್ನೆದುರಲ್ಲಿ
ನಿಂದ ಯೇಸುವ ನಿಟ್ಟಿಸಿದನಾ ಪಿಲಾತಂ.

ಏನರಿವನಾ ರಜೋಮತಿ ರೋಮಕಂ ತನ್ನ
ಮುಂದಿರುವ ಸತ್ತ್ವಮೂರ್ತಿಯ ಸತ್ತ್ವವನೊ? ಸತ್ಯ
ವಿಗ್ರಹನ ಸತ್ಯವನೊ? ನಿತ್ಯಸುಂದರನಾತ್ಮ
ಸೌಂದರ್ಯವನೊ? ಬಡವನೀತನೇನಕೆ ತನ್ನ
ಹುಟ್ಟು, ಬಡಗಿಯ ಕೆಲಸ ಬಿಟ್ಟು, ಹೊಸ ಧರ್ಮವಂ
[3]ಸಾರ್ವನೆಂದಿಂತಕಿಂಚನನಾಗಿ ದಿನಕೊಂದು
ಕೂಳಿಲ್ಲದಿಂತು ಕೃಶವಾಗಿರುವನೆಂದು ಕನಿ
ಕರಿಪನಲ್ಲದೆ, ದೇವಸುತನಿಂದ ಮೇಣನ್ಯ
ಶ್ರೀಮಂತನಿಲ್ಲ, ಬದುಕಿರುವಂದೆ ದೇವರಲಿ
ಸಾಯುಜ್ಯವಡೆಯೆ ಪಾತಕಿ ಮನವ ನೇರ್ವಡಿಸೆ
ಧ್ಯಾನೋಪವಾಸವಲ್ಲದೆ ಬೇರೆ ಪಥವಿಲ್ಲಗಂ
ವೆಂದು ಲೋಕಕೆ ಸಾರಲದನೆ ತಾನಾಚರಿಸಿ
ಬಡವಾದನಿವನೆಂದರಿವನೆಂತು ರೋಮಕಂ?
ಮನೆಮಾರು ಮೊಡಿ ನೆಮ್ಮದಿಯೂಗಿ ಬಾಳದಿಂ
ತಲೆವನೇತಕೆ ಬೆಸದರೊಡನೆ, ಹರೆಯುವನೇಕೆ
ಮರಳಿನೊಂಟೆಯೊಲಿಂತು [4]ದುಂದುಗೆಡಿಸುವನೆಂದು
ಮನದಿ ಹೀಗಳೆವನಲ್ಲದೆ, ಲೋಕವಿವನ ಮನೆ,
ಲೋಕರುದ್ಧಾರಣವೆ ಮನೆವಾರ್ತೆ, ಪಾಪದಿಂ
ಪಾಪಿಗಳನೆತ್ತೆ ಬಾಳ್ವೆಯ ತೆತ್ತ ಬೆಸದರೀ
ತನ ಬಳಗವಿಳೆಯ ಹೇರಿದ ಭಾರ ಹೊರುವ ಸಂ
ಕಷ್ಟಗಳ ಮರುವ ದಾಂಟಿಸಿ ಪಾರಗಾಣಿಸುವ
[5]ಒಂಟಿ ಇವನೆಂದಾ ಪಿಲಾತನಕಟರಿವನೇಂ?

---

[1]ಅಕ್ಕಜ=ಅಶ್ಚರ್ಯ, [2]ಅಸೂಯೆ. [3]ಅಕಿಂಚನ=ಬಡವ. [4]ದುಂದುಗೆಡಿಸು=ಹಾಳುಮಾಡು [5]ಒಂಟಿ=ಒಬ್ಬಂಟಿಗ.

ಇದೊ ೧೧ಯೆಹೂದ್ಯದೊಳಿರುವ ದೇಸಿ ಪರದೇಶಿಯ
ತನುಮನಧನಂಗಳಂ ಸೂರೆಗೊಂಡಕಟೊಂದು
ಕಣ್ಣ ಕೊಟಕೆ ದೊರೆಯದಾಕೆ, ತನ್ನೆನಿತೆನಿತೊ
[6]ಹೊನ್ನಂಬುಗಳಿಗೆ ಗುರಿವಡದಾಕೆ ರೋಮಿಾಯ
ಸಮ್ರಾಜನಿವಳನರಿಫೊಡೆನೆ ತನ್ನಂರ್ಧಾಂಗಿ
ಮಾಡಿಕೊಳುವಾಕೆ, ೧೧ಯೂದಾಯದ ೧ಿಪೇಲೀನಳಿನೆ,
ಕ್ಲಿಯೊಪಾತ್ರಳೆನೆ, ಮದನನೆಸೆದಿಹ ಜಗನ್ಮೋಹ
ನಾಸ್ತ್ರಮೆನೆ, ಪ್ರತ್ಯಕ್ಷ ರತಿಯೆನೆ ಜಸಂಬೆತ್ತ

೧ಶಮಗ್ದಲದ ಮ:ರಿಯಳೀ ಯೇಸುವಿಗೆ ಮನಸೋತು
ತನ್ನದೆಲ್ಲವ ಬಿಟ್ಟು, ಬಡತನವನುಟ್ಟವನ
ಬೆಂಬಳಿಯ ತೊತ್ತಾಗಲಾವ ಭಾಗ್ಯವಿದೆಂದು
ತುಟಿಗಚ್ಚಿ ನಿಟ್ಟುಸಿರ ಬಿಟ್ಟನಲ್ಲದೆ, ಸುಖದ
ಮಿಗಿಮಿಗಿಲಿನಿಂದಾಕೆ ಬೆಂದು ಮನನೊಂದು ಭುಗಿ

ಭುಗಿಲ್ವ [7]ಕಾವರಕೆ [8]ದಾವರಿಸಿನ್ನು ಮರುಭುವಿಯ
ಹಕ್ಕಿಯೊಲು ನೀರಡಸಿ ಬಂದಿವನ ತಣ್ಣಡಿಯ
ನೀಂಟುತೀ ನಿತ್ಯಜೀವನದ ಬುಗ್ಗೆಯ ಬುಡದಿ
ಗುಣಕೆ ನಲ್ಲನ ಪ್ರೇಮಧರ್ಮದಾಸ್ಯವನಾಂತು
ತಂಗಿರುವಳಾ ಮರಿಯಳೀ ಪವಿತ್ರ ಪ್ರೇಮ
ವಲ್ಲರಿಯ ಪಿಕವೆಂದು ಬಲ್ಲನೆ ಪಿಲಾತಂ ?

ಸಾಕೆನ್ನ ಮನಸೆ ನಮಗೇನಾತ್ಮತೃಪ್ತನಾ
ಶುಷ್ಕಹೃದಯನ ಬಗೆಯ ಗೊಡವೆ ? ನೀನೆಮ ನೋಡ
೧ಳಲೋಕದುರುಪಾಪವಂ ಹೊತ್ತ ಕುರಿಮರಿಯಂತೆ,
ಗಿಡುಗಗಳ ನಡುವೆ ತೊಡರಿದ ಕಪೋತಕದಂತೆ

ನಿಂದಿರುವ ಮನುಜಸುತನಾ ಜಗದ್ರಕ್ಷಕನ !
ನರತನುವನಾಂತು ಮೂವತ್ತೆರಡೆ ವಯಸಂತೆ,

---

[6]ಹೊನ್ನಂಬು = ಚಿನ್ನದ ಬಾಣ, ಅಂದರೆ ಹಣ.
[7]ಕಾವರ = ಮನಸ್ಸಿನ ಬೇಗೆ
[8]ದಾವರಿಸಿ = ಬಾಯಾರಿ.

[9]ಎರಡು ಸಾವಿರ ಕೆಯ್ಯ ಕಾಲನಳಸದ ಚೆಲುವ
ನರನೊ ನಾರಿಯೊ ಪೇಳಲಸದಳಂ !— ಹೆಣ್ಣಿಗೆಯ
ನಯನದಿ ಭವಿಷ್ಯವಂ ತಿವಿವ ಪುರುಷನ ದೃಷ್ಟಿ,
ಹೆಣ್ಣೆದೆಯ ಮಾರ್ದವದಿ ಗಂಡಿನ ಮನೋದಾರ್ಢ್ಯ,
ತಾಯ ಲಲ್ಲೆಯೊ, ತಂದೆಯಕ್ಕರೆಯ ಜಂಕಣೆಯೊ !
ಇಹಪರದ ನಡುವೆ ನೆಟ್ಟನೆಯ ನಿಶ್ರೇಣಿಯೆನೆ
ನಿಂದಿಹನ ನೋಡ ! ದಿವ್ಯಜ್ಞಾನದೇಕಾಂತ
ದಾಡುಂಬೊಲವೊ ಪೃಥುಲಮವಲಿನ ಲಲಾಟವದೊ
ನೋಡ ! ಮಾರನ ತರಿದ ನಿಡುವಾಳೊ ನಾಸಿಕವೊ
ನೋಡ ! ಮೊಗತುಳುಕುವಾ ತಂಬೆಳಕೊ ಪ್ರೇಮಾಂಬು
ನಿಧಿಯನುಬ್ಬರಿಸುವಮೃತಾಂಶು ಕಾಂತಿಯೊ ನೋಡ !
ನೋಡ ಗಱಗಲಿಲಾಯ ಸಾಗರದೊಲಲು ವಿಶಾಲ ವ
ಕ್ಷವನಂತೆ ಗಂಭೀರವಂತೆ ಪ್ರೇಮಾಧಾನ
ಹೃದಯವಂ ನೋಡ ! ವಜ್ರದ ಹರಳೊಳಡಕವಾ
ಗಿರುವ ದ್ರವಾಗ್ನಿಯಂತಾಘಾಲಗುಲ್ಫಮಾ[10]
ನಿಪ್ಪಟ ಬ್ರಹ್ಮಚರ್ಯದ ದೀಧಿತಿಯ ನೋಡ !
ನೋಡ ನೋಡಂದಿನಿಪ್ಪತ್ತು ಶತಕದ ಹಳೆಯ
ಕಾಲನಾ ಕನ್ನಡಿಯಿನಿಂದಿನೀ ಜವನಿಕೆಗೆ
ಪ್ರತಿಬಿಂಬಿಸುವ ಸೊಂಪ ಜಗದುಂಬಿಸುವ ಪೆಂಪ
ತನಗೆ ತಾನೆಣೆಯ ದೇವಾತ್ಮಜಾತನ ನೋಡ !
ಆಪನಿತು ನೋಡ, ಕಣ್ತುಂಬ ನೋಡೀಗಳಿದೊ
ಈ ಹರೆಯದೀ ಶೋಭೆಯಿ ಜಗತ್ಪ್ರೇಮದೀ
ಸುಜ್ಞಾನದೀ ಶಾಂತಿಯೀ ಮಹಿಮೆಯೀ ಜಿತಾ
ತ್ಮತೆಯೀ ತಪಃಶಕ್ತಿಯೀ ಧರ್ಮದೀ ಮನುಜ
ದೇವತನದೀ ಸುಧಾಸಿಂಧು ಗಱಯೋರ್ದನಿನಂತೆ
ಸುರಿವುದಕಟಾ ಮೃತಸಮುದ್ರದಲ್ಲಿ ನೋಡ !

9 ಯೇಸು ಮರಣಪಟ್ಟು ಈಗ ೨೦೦೦ ವರ್ಷವಾಗಲಿಕ್ಕೆ ಬಂತು ; ಅಂಥಾ ಪ್ರತಿ ವರ್ಷ ಎಂದರೆ ಕಾಲನ ಒಂದು ಕೆಯ್ಯಂತೆ. 10 ಆಘಾಲಗುಲ್ಫ=ನೆತ್ತಿಯಿಂದ ಕಾಲಿನ ಹರಡಿನವರೆಗೆ ಚಾಚಿರುವ.

ಗದುಗೆಯಿನೆದ್ದಾಗಳಾ ಪಿಲಾತಂ ನೆರೆದ
ನೆರವಿಗಿಂತೆದನೀತನೊಳಾವ ತಪ್ಪಿವನ
ನೇಕೆ ತಂದಿರಿ ? 'ದಂಡನೀಯನಲ್ಲದೆ ವೃಥಾ
ನಿನ್ನ ಬಳಿಗೀತನಂ ತಂದು ನಿನಗೊಪ್ಪಿಪೆವೆ?'
ಎಂದುದಾ ಮಂದಿ. 'ಅಂತಾದಡಿವನಿಗೆ ನಿಮ್ಮ
ದಂಡನೀತಿಯೊಳೆ ಶಿಕ್ಷೆಯ ವಿಧಿಸಲಾಗದೇಂ ?'
'ಯೆಹೂದ್ಯರೆಮ್ಮ ಕಟ ಶಾಸನದಿ ವಧದಂಡ
ಕೆಡೆಯಿಲ್ಲ, ನಾವಾರನಾದೊಡಂ ಕೊಲಬಾರ
ದೆಂದೆ [11]ಹನನೀಯನೀತನನಿಲ್ಲಿಗೆಗೊಯ್ದು ರೋ
ಮಿಾಯ ಶಾಸನಕೊಪ್ಪಿಸಿಹೆವದಲ್ಲದೆ ಬಗೆಯ
ಲೆಂತೊ ಧರ್ಮದ್ರೋಹಿಯಂತೆ ರಾಜದ್ರೋಹಿ
ತಾನಿವಂ ! [೧೨] ಕೈಸರಗೆ ತೆರಿಗೆಯಿಂ ತೆರಬಾರ
ದೆಂದು ಮಾಣಿಸಿದವಂ ! ಯೆಹೂದ್ಯ ಜನಪದಕೆ
ತಾನೇಕರಾಜನೆಂದಮವು ಸಾರುವನಿವಂ !
ರೋಮಿಾಯ ಚಕ್ರವರ್ತಿಯೆ ವಿನಾ ನಮಗನ್ಯ
ನೃಪನುಂಟೆ ? ರೋಮರಾಜನೊಳಿಂತು ಮಾರ್ಮಲೆವ,
ಜನರ ಮಾರ್ಮಲೆಸಸುವೀ ಪರಿಯ [೧೩] ರಾಜಜಿಘಾಂಸು
ಗೆಮ್ಮ ಬಡ ಧರ್ಮದಂಡವೆ ಸಾಕೆ ? ಕೇಳವನ,
ತಾನಾರೆನುವನೆಂದು ಕೇಳೊಡೆಯ ! ನಮ್ಮ ನುಡಿ
ನಂಬದೊಡೆ, ನಿನ್ನ ಕಿವಿಗಳ ನಂಬಲೊಲ್ಲೆಯೇಂ ?'
ಅಂತವರೊಳೊಬ್ಬರಿಬ್ಬರು ತೊಡಗಿ ಬಳಿಕೆಲ್ಲ
ರೊಂದಾಗಿ ನರಿಗಳಂತೊದರಲಿತ್ತಧಿಕಾರಿ
ಯೇಸುವಂ ನೋಡುತ 'ಯೆಹೂದ್ಯರರಸನೊ ನೀನು ?'
ಎಂದು ಕೇಳಲು, ಮನಸ್ಸಾಕ್ಷಿಯಂತಿನಿದಾಗಿ
ನೀನದನೆ ನುಡಿದೆಂದು ಯೇಸು ಕಿರುನುಡಿದಂ.

ಅಂತೆನೆ ಪಿಲಾತನಾತಗೆ 'ನಿನ್ನ ಜನಪದವೆ
ನಿನ್ನ ಯಾಜಕರೆನಗೆ ನಿನ್ನನೊಪ್ಪಿಸುವಂತೆ

---

11 ಹನನೀಯನು = ಕೊಲ್ಲಲ್ಪಡಲಿಕ್ಕೆ ಯೋಗ್ಯನಾದವನು.

ನೀನೇನ ಗೆಯ್ದೆ ?' ಎನೆ, 'ನನ್ನ ರಾಜ್ಯವಿದಲ್ಲ,
ಈ ಲೋಕದಿಂದ ಬೇರೆಡೆಯೆ ಇದೆ' ಎಂದವಂ
ಮರುನುಡಿಯೆ ಮರಳಿ 'ನೀನಂತೆನಲು ಅರಸನೇ ?'
ಎನೆ ಪಿಲಾತಂ 'ಕಾಲಮೊನೆ ನಿನ್ನಿಂದ ತಿರಿ
ತಿರಿಗಿ ನುಡಿಸುವುದೈಸೆ ? ನನ್ನ ರಾಜತೆಗೊಂದೆ
ಸತ್ಯವನಿತರ ಸಾಕ್ಷಿ ! ಸತ್ಯವೆನ್ನಯ ರಾಜ್ಯ !
ಸತ್ಯವನ್ನಿಡೇರಿಸುವ ರಾಜನಾಂ ಗಡಾ !'
ಎಂದನಾ ಯೇಸುವದಕಾ ಪಿಲಾತಂ ನಕ್ಕು
ಸತ್ಯವೆಂದೆಯ ? ಸತ್ಯವೆಂದರೇನೆಂದುಸುರಿ,
'ಇದೊ ಯೆಹೂದ್ಯರೆ, ಇವನೊಳೇನುಮಪರಾಧವಂ
ಕಾಣೆ ; ತಾನರಸೆಂದರೇನು ? ತನ್ನಯ ರಾಜ್ಯ
ವೀ ಲೋಕದಲ್ಲವೆನೆ, ಸಾರ್ವಭೌಮನಿಗೆಂತು
ಪ್ರತಿಯೋಗಿಯಹನಿವಂ ? ವಿಧಿಸೆ ಮರಣವನಿವಗೆ
ಕಿರಿದಾನುಮಪರಾಧವೆಲ್ಲಿ : ಮೇಣದೊ ಆಪಸ್ಕ
ಹಬ್ಬದೀ ದಿನದೊಳಪರಾಧಿಯೊರುವನ ಬಿಡಿಸಿ
ಕೊಳುವುದದು ನಿಮ್ಮ ಕಟ್ಟಳೆಯೈಸೆ? ಆದರಂತೆ
ಬಿಟ್ಟುಕೊಡಲೆ ಯೆಹೂದ್ಯರರಸನೀ ಯೇಸುವಂ?
ಯಾರನಾಯ್ವಿರಿ? ಕ್ರಿಸ್ತನೆಂಬುವೀ ಯೇಸುವನೊ?
ಮೊನ್ನೆ ದಂಗೆಯಲಿ ಕೊಲೆಗಯ್ದಾ ಬರಬ್ಬನನೊ?
ಎನೆ ಪಿಲಾತಂ, ನೆರವಿ ಬೊಬ್ಬಿರಿದುದೊಡನಿಂತು
'ಬಿಡಿಸಾ ಬರಬ್ಬನನೆ! ಬಿಡಿಸಾ ಬರಬ್ಬನನೆ!'
'ಅಂತನೆ ಯೆಹೂದ್ಯರರಸನನಿವನನೇಂ ಗೆಯ್ವೆ?'
'ಗಲ್ಲಿಗೇರಿಸು! ಶಿಲುಬೆಗೊಡನೆ ಹಾಕೀತನಂ!'
ಎಂದೆದ್ದ ಕೋಲಾಹಲವ ಸಂತವಿಸಲವಂ
ಎನಿತೊ ಸಲಬಾಯೆತ್ತೆ ಮಾತೊಂದು ಕೇಳಿಸದೆ
ಗಲ್ಲಿಗೇರಿಸು; ಸಿಲುಬೆಗಿಕ್ಕೆಂಬ ಕಲಕಲವೆ
ಎದ್ದೆದ್ದು, ನಡುವೆ ತವಿವಂದು, 'ತಪ್ಪಿವನದೇಂ?
ಮರಣದಂಡವನೀಯಲಿವನೊಳೇಂ ಕಾಣೆನಿದೊ
ಕೊರಡೆಯುಂ ಬಡಿಸಿವನ ಬಿಡಿಸಿದಡೆ ಸಾಲದೇ?'
ಎಂದವನ ಮಾತಿಗೆ ಯೆಹೂದ್ಯರೆಲ್ಲರು ಕೆರಳಿ--

'ಏನೆಂದೆ? ರಾಜಘಾತಕನಿವನನಿಂತು ಬಿಡೆ,
ರಾಜೋಪಜೀವಿ ನೀನಲ್ಲ! ರಾಜದ್ರೋಹಿ!
ಇವನ ನೀ ಕೊಲಿಸದಿರೆ ರಾಜಕರ್ಮವ ಸಮಂ
ತೆಸಗಿದೆಯ? ಇನ್ನಿವನ ಜೀವದಿಂದಿರಲೀವ
ಕರುಣೆ ಏತರ ರಾಜನೀತಿ? ಯಾವಂ ಪಟ್ಟ
ರಾಜನಂ ರಾಜನೆನ್ನದೆ ತಾನೆ ಅರಸೆನುವ
ನವಗೆ ಮರಣದಿನನ್ಯ ವಿಧಿಯೆ? ಮೇಣಂಥವನ
ಕೊಲದೆ ಕೊಲಿಸದೆ ಬಿಡುವನಾವನವನರಸನಿಗೆ
ಹಿತಶತ್ರುವಹನೊ ಮಿತ್ರನೊ ಬಗೆಯ! ಅಕಟೆಮ್ಮ
ಧರ್ಮಶಾಸ್ತ್ರದಿ ಮರಣದಂಡಕೆಡೆಯಿರೆ, ಪರರ
ಬಾಗಲಿಗೆ ನೀತಿಭಿಕ್ಷೆಗೆ ಬರುವೆವೇನಿಂತು
ನಿಮ್ಮ ನೀತಿಯಿನೆಮ್ಮ ಧರ್ಮವಂ ಕಾಯೆಂದು,
ನಿಮ್ಮೇಕಛತ್ರದೀ ನೆಳಲನೆಮಗೀಯೆಂದು
ಬೇಡುವೆವೆ? ಇನ್ನು ನೋಡೀಗ ಸಿಲುಕಿದನಿವನ
ಕನಿಕರಿಸಿ ಬಿಡೆ, ಡೊಂಬಿಗಾರನಿವನಂ ಮರಳಿ
ಹಿಡಿವುದೆನೆ ಸಾಧ್ಯವೇನಿನ್ನಿವಂ ಯೂದಾಯ
ದಾ ತುದಿಯಿನೀ ತುದಿವರಂ ಕಾಟಕಾಯಿಗಳ[12]
ನೆಬ್ಬಿಸದೆ ಬಿಡುವನೇನಂದು ಸಮ್ರಾಜನಿಗೆ
ಏನುತ್ತರನೀವೆ? ಕಟ್ಟಿತಂದವನನಾಂ
ಬಿಟ್ಟೆನೆಂಬೆಯ? ನಿನ್ನ ಹಗೆಯುವನನಾಂ ಬೆಳೆಯ
ಗೊಟ್ಟೆನೆಂಬೆಯ? ನಮ್ಮ ಜೋಕೆಯಂ ಬಗೆಯದೊಡೆ,
ನಿನ್ನ ಜೋಕೆಯನೆ ಮುಂಗಾದುಕೊಳು ಜೀಯಾ!'

ಇಂತವರ ಮಿಸುನಿಯೊರೆ[13] ಯಿಂ ಮಿಸುಕುವಸಿಧಾರೆ
ಯಂತೆಸೆವ ನುಡಿಗಳಂ ಕೇಳುವ ಪಿಲಾತಗಾ
ತನ ಮಡದಿ–'ಇಂದೆ ಮುಂಜಾನೆ ಕನಸಾಂತು ನಾ
ನತಿಸಂಕಟಂಬಟ್ಟೆ; ಮುಂಬೆಳಗ ಕನಸು ಬರಿ
ದಾಗದೀ ನಿರಪರಾಧಿಯ ತಂಟೆ ಬೇಡೆಮಗೆ'––

12 ಕಾಟಕಾಯಿ = ಸೂರೆ, ಸುಲಿಗೆ, ಬಂಡಾಯ.
13 ಒರೆ = ಖಡ್ಗದ ಕೋಶ (sheath)

ಎಂದು ಸಂದೇಶವಂ ದೂತಮುಖದಿಂ ಕಳುಹೆ,
ಯೇಸುವಂ ಬಿಡೆ ತನಗೆ ಮನಸಿಲ್ಲಮೆಂದಿಸಿದೊಡಂ,
ಬಿರುಗಾಳಿ ಹಿಗ್ಗಿಸೆ ಗಿಶಿತಿಬೇರಿಯಾಂಬುಧಿಯಂತೆ
ಭೋರ್ಗರೆವ ಜನಸಂದಣಿಯು ಕಂಡು ಮನಸು ಕಳ
ವಳಿಸೆ, ಶಿಕೈಸರ ತಿಬೇರಿಯನ ಹಿತಶತ್ರುವಾ
ನಹೆನೊ ಮಿತ್ರನೊ ಎಂದು ಝುಳಪಿಸಿದ ಜಡಿನುಡಿಗೆ[14]
ಮನದ ಧೈರ್ಯಂ ಬೆಳರೆ,[15] ಯೆಹೂದ್ಯರೊಡನೆ ತನ
ಗೀ ಮುನ್ನಮಾದ ಮಸದಾಟವಂ ನೆನೆದು, ಮೇ
ಣದುವೆ ಸಮ್ರಾಜನೆಡೆಗಿವರಂದು [16]ಮನವಿಯಂ
ಬರಕೊಂಡುದಂ ನೆನೆದು, ತನಗದೆ ತಿಬೇರಿಯಂ
ಪೋಗದಿರವರ ತಳ್ಳಿಗೆಂದೆಚ್ಚರಿಸಿ ಬರೆಸಿ
ದೋಲೆಯೊಕ್ಕಣೆಯ ಕಟ್ಟಾಜ್ಞೆಯಂ ೨೧ನೆನೆನೆದು
ಮೆಯ್ಯ ಮುಳ್ಳೇಳೆ, 'ಧರ್ಮಾಂಧರೀ ಯೊಹೂದ್ಯ
ರಿವರಿಗೀ ಯೇಸುವಿನೊಳಿರುವ ಧರ್ಮಾಸೂಯೆ
ಗಾಂ ದುಡುಕೆ [17]ಗಂಡೋಲಿಗಳ ಗೂಡಿಗೆಸೆದ ಕ
ಲ್ಲಂತಾಗದಿರದು; ಮೇಣದುವೆ ನೆವಗೆಯ್ದಿವರು
ನಮ್ಮ ನೊಗದಿಂ ತಮ್ಮ ಬಿಡುಗಡೆಗೆ ಹೆಣಗಾಡೆ,
ನನ್ನೊಡೆತನದೊಳೀ ಯೆಹೂದ್ಯವಿಂತಕಟೆಮ್ಮ
ಕೆಯ್ತೊಲಗೆ, ರೋಮಸಾಮ್ರಾಜ್ಯದ ಜಗನ್ಮಹಿಮೆ
ಎಲ್ಲಿ? ರೋಮಿಾಯರೆ ಜಗಜ್ಜೇತರೆಂಬ ಪೆಂ
ಪೆಲ್ಲಿ? ೨೨ರೋಮಿಾಯರಾಳಲು ಹುಟ್ಟಿದವರೆಂಬ
ನಮ್ಮ ಜಾತ್ಯಭಿಮಾನವೆಲ್ಲಿ? ನಮ್ಮಿತಿಹಾಸ
ದೊಳಗೆನ್ನ ಹೆಸರನುಸುರವರೆಂತು? ಸಾಕದಂ
ತಿರಲಿ, ಸಮ್ರಾಜನೆನಗೇನೆನುವನೆನ್ನ ಕೃಪೆ
ಯಂ ದ್ರೋಹವೆಂದೆಣಿಸದಿಹನೆ? ಮೇಣೀ ದೂರ
ನಲ್ಲಿವೆರೆಗಿವರೊಯ್ಯದಿಹರೆ? ಚಂಚಲಚಿತ್ತ

---

[14]ಜಡಿನುಡಿ=ಜಂಕಣೆಯ ಮಾತು. [15]ಧೈರ್ಯಂ ಬೆಳರೆ=ಧೈರ್ಯ ಬಿಳಿದಾಗಲು, ಅಂದರೆ ಎದೆಗುಂದಲು. [16]ಮನವಿ=ಬಿನ್ನವತ್ತಳೆ (petition)
[17] ಗಂಡೋಲಿ (ಸಂಸ್ಕೃತ—ಗಂಧೋಲಿ)=ಕಡಜ (hornest wasp).

ನವನೆನ್ನ ಮರಳಿಂದಡಕಟೆನ್ನ ಪಾಡೇನು ?
ಮುದಿಯ ಮೊಸಳೆಯ ಮಡುವಿಗಿನ್ನೊಮ್ಮೆ ಧುಮುಕುವನೆ ?
ಹಳಗಿಪಡೆ ಹುಲಿಯ ಹಸಿವೆಗೆ ಹೋತನೀವಂತೆ,
ಇವರ ನೆತ್ತರ ತೃಷೆಗೆ ನಿರ್ದೋಷಿ ಈತನ
ನ್ನೀಯುವುದೇ ನಿಶ್ಚಯಂ' ಎಂದವಂ ಬಗೆದು, ಮುಂ
ದಣ [18]ಕಟಾಂಜನಕಯ್ದಿ, ನಿಂದ ಯೇಸುಗೆ ಬೆರಳ
ತೋರಿಸಿದೊ ಇಸನೋಡೀ ಮನುಷ್ಯನಂ, ನೋಡಿದಿರಿದೊ
ನಿಮ್ಮ ರಾಜನೆಂದಡವರೇಕಕಂಠದಿಂ
ಗಲ್ಲಿಗೇರಿಸು ಸಿಲುಬೆಗೇರಿಸೀತನನೆಂದು
ಬೊಬ್ಬಿರಿಯೆ, 'ನಿಮ್ಮರಸನಂ ಗಲ್ಲಿಗೇರಿಸಲೆ ?'
ಎನಲವಂ, 'ಕೈಸರನನ್ಯ ನೃಪನೆಮಗಿಲ್ಲ !'
ಎಂದು ಗಲಭೆಯ ಮಾಡುತಬ್ಬರಿಸುವಾ ಗುಲ್ಲ
ಕಂಡಾತನಿನ್ನು ಯತ್ನಿಸೆ ನಿರರ್ಥಕವೆಂದು
ನಿರ್ಧರಿಸಿ ನೀರ ಬಟ್ಟಲ ತರಿಸಿ ಕೆಯ್ಗಳ
ನ್ನದರೊಳದ್ದಿಸಿ ತೊಳೆದು 'ನಿರಪರಾಧಿಯ ರಕ್ತ
ಕಿದುಗೊ ಹೊಣೆ ನಾನಲ್ಲ' ಎನಲೆಲ್ಲರೊಮ್ಮಿಗೆಯೆ
ಎಮ್ಮ ಮೇಲೆಮ್ಮ ಮಕ್ಕಳ ಮೇಲಿವನ ರಕ್ತ
ವಿರಲೆಂದು ಸಂತೋಷದಿಂದಲಾರ್ಬಟಿಸಿದರು
ಹಿಂಡೊಡೆದು ಕಾಡಿನೊಳಗಂಡಲೆವ ಕುರಿಮರಿಯ
ಕಂಡುಬ್ಬಿ ತೋಳಗಳ [19]ಗುಂಡೂಳುವಂತೆ,

ಇನ್ನು ತಳುವದೆ ಪಿಲಾತಂ ಯೇಸುವಿಗೆ ವಧ್ಯ
ನೆಂದು ಮರಣಾಜ್ಞೆಯಂ ವಿಧಿಸಿ, ಚಮ್ಮಟಿಗೆಯಿಂ
ಬಡಿಸಿ, ಸಿಲುಬೆಯೊಳಿಕ್ಕಿರೆಂದು ರಾಣುವೆಯವರಿ
ಗವನನೊಪ್ಪಿಸಿ, 'ಯೆಹೂದ್ಯರ ರಾಜ ಇಳನಜರೇತಿ
ನವನೇಸು' ಎಂದೊಂದು ಹಲಗೆಯಲಿ ಮೂಬರೆಹ ಇ

18 ಕಟಾಂಜನ=ಕಟಕಟೆ (balcony)
19 ಗುಂಡು=ಗುಂಪು ; ಊಳು=ಕೂಗು (to howl, to cry out)

ದಿಂ ಬರೆಸಿ ಸಿಲುಬೆಯೊಳದಂ ತೂಗಿರೆನೆ, ನೆರೆದ
ಯಾಜಕರ ಮಂದಿ [20]ನಿಬ್ಬೆರಗಾಗಿ ಏನಿದೇ
ನಿಂತು ಬರೆಸಿದೆ? ಯೆಹೂದ್ಯರ ರಾಜನೀ ಯೇಸು
ವೆಂದು ಬರೆಸದೆ, ಯೆಹೂದ್ಯರ ರಾಜ ತಾನೆಂದ
ನೀತನೆಂದನಿತೆ ಬರೆಸಾ !' ಎಂದು ಬೇಡಿಕೊಳೆ,
ಬರೆದುದಂ ಬರೆದೆ ಗೆಯ್ದುದ ಗೆಯ್ದೆನೆಂದವಂ
ಹಿಂಗಡೆಯಿನಿಳಿದು ಆರೋಗಣೆಗೆ ಹೋದಂ

ರಾಣುವೆಯರಿತ್ತ, ಕಾವಲ ಮನೆಗೆ ಯೇಸುವಂ
ಕೊಂಡೊಯ್ದು, ಕಾವಲರ ದಳವೆಲ್ಲ ಸುತ್ತು ನಿಂ
ದಿರಲವನ ಬಟ್ಟೆ ಸೆಳೆತೆಗೆದು, [21]ಕಿಸುಸೇಲೆಯಂ
ಹೊದಿಸಿ, ಮುಳ್ಳಿಂದ ಮಾಡಿದ ಮಕುಟವಂ ಮುಡಿಸಿ.
ಬಲಗೆಯ್ಯೊಳೊಂದು ಬೆತ್ತವನಿತ್ತವನ ಮುಂದೆ
ಮೊಣಕಾಲನೂರುತ 'ಯೆಹೂದ್ಯರರಸನೆ ಸ್ವಸ್ತಿ!'
ಎಂದುಗೊಳ್ಳನೆ ನಕ್ಕು ಮೂದಲಿಸಿ, ಮೊಗದಿ[22] ತೂ
ಪಿರಿದದುವೆ ಬೆತ್ತದಿಂ ಬಡಿಯೆ, ಬಾಸುಳೆಗಳಿಂ[23]
ಪ್ರೇಮದರುಣೋದಯವೊ, ನಿರ್ದೋಷನಿವನೆಂಬ
ಮೂಕಸಾಕ್ಷಿಯೊ ಎನಲು ನೆತ್ತರೊಡಮೂಡಿದೊಡ
ಮವನೊಂದು ಮಾತನೆತ್ತಿಲ್ಲ ! [24]ಮಾ ಎಂದಿಲ್ಲ !
ಕಾಗೆಗಳ [25]ಕೊತ್ತಳಂ ಕುಕ್ಕುವೆಳೆಕುಕಿಲಂತೆ,
ಕೆಂಡಗಳ [26]ಕೋವೆಯಲ್ಲಿ ಕಾವ ಕಾಂಚನದಂತೆ,
ಮಂಜು ಮುಸುಕಿರುವ [27]ಬೈಗಿನ ಬೆಳ್ಳಿಯಂತೆ, ನೋ
ಡೆಲ್ಲ ಹಿಂಸೆಯನಂತು ಸಹಿಸಲವನಿನ್ನವಗೆ
ಹೊದಿಸಿದರುಣಾಂಶುಕುವ ತೆಗೆದವನ ತೊಡಿಗೆಯನೆ
ತೊಡಿಸಿ, ವಧ್ಯಸ್ಥಾನಕಂದೆ ಸಿಲುಬೆಗೆ ಹಾಕ
ಲಿರುವೆರಡು ಕಳ್ಳರೊಂದಿಗೆ ಯೇಸುವಂ ನಡಸಿ

---

20 ನಿಬ್ಬೆರಗಾಗಿ=ತಳವೆಳಗಾಗಿ 21 ಕಿಸುಸೇಲೆ = ಕೆಂಪು ಬಟ್ಟೆ, [22]ತೂಪಿರಿದು=ಉಗುಳಿ. 23 ಬಾಸುಳೆ = ಬಾಸುಂದೆ, 24 ಮಾ=ಬೇಡ, 25 ಕೊತ್ತಳ=ಹಿಂಡು. 26 ಕೋವೆ=ಕುಲಿಮೆ. 27 ಬೈಗಿನ=ಸಂಜೆಯ. ಬೆಳ್ಳಿ=ನಕ್ಷತ್ರದಂತೆ ಮರೆಯು ಶುಕ್ರ ಗ್ರಹ.

ಕೊಂಡೊಯ್ದರವರು. ನೋಡೆನಿತು ಬಲುಗುಂಪು! ನೋ
ಡೆನಿತು ಹೆಂಗಸರವನ ಬಳಿವಿಡಿದು ಎದೆಬಡಿದು
ಗೋಳಾಡುತಿರೆ ಕೇಳಿ ಮೊಗದಿರುಹಿ ಯೇಸುವಿಂ
ತೆಂದನ್ನವರ್ಗೆ—'ಯೆರೂಸಲೇಮ ದುಹಿತೆಯರಿರಾ!
ನನಗೆ ಗೋಳಾಡದಿರಿ ; ನಿಮಗಾಗಿ ನಿಮ್ಮ ಮ
ಕ್ಕಳಿಗಾಗಿ ಗೋಳಾಡಿ! ಇದೋ ಬರುತಲಿವೆ ದಿನಂ,
ಧನ್ಯರೆನಿತಕಟ ಬಂಜೆಯರು! ಹೆರದಾ ಬಸಿರ್ಗ
ಳೆನಿತು ಧನ್ಯವೊ! ಧನ್ಯವೆನಿತೊ ಹಾಲೂಡಿಸದ
ಮೊಲೆಗಳೆಂಬುವ ದಿನಂ ಬರುತಲಿವೆ! ಅಂದಿಗೆಲೆ
ಬೆಟ್ಟಗಳೆ! ನಮ್ಮ ಮೇಲುರುಳಿರೆಲೆ ಗುಡ್ಡಗಳೆ!
ಮುಚ್ಚಿರಕಟಾ ನಮ್ಮನೆಂಬರಿದೊ ಹಸುರೆಲೆಯೊ
ಳಿಂತಾಗೆ ತರಗಲೆಯೊಳೇನಾಗದಿಹುದು!'

* * * *

ಅಂದಿದೊ ವಸಂತಪೂರ್ಣಿಮಿಯ ಭೃಗುವಾರದಾ
ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ ;
ನೋಡೋದೆ [28]ಬರವೋಡ ಬಾನಗಲ ಚಾಚಿ ೨೬ನೋ
ಹನ ಕಾಲದಾ ಪ್ರಲಯಮೇಘವೆನೆ ಮುಚ್ಚಿಹುದು :
ಬೇಗೆಯಂ ತಡೆಯಲಾಗದು, ಗಾಳಿ ಸೂಸದಿಳೆ
ಯುಬ್ಬಸದೊಳೇದುತಿದೆ, ಮರಗಳಲಿ ಕದಲದೆಲೆ,
ಹಕ್ಕಿಗಳ ಉಸುರಿಲ್ಲ ; ನೆಟ್ಟಿರುಳೊಳಂತೆ ಮನೆ
ಮನೆಯೊಳುಸಿಕಣೆ ಸಂತಮಿರತಕ್ಕ ಜನಪದಂ
ಧಗೆಯ ಹೆಬ್ಬಾವಂತೆ ಹೊರಟು [29]ತಿಂತಿಣಿವರಿದು
ಬಂತು ಶಲಭಸಮೂಹದಂತೆ ಯೇರೂಸಲೇಮ್
ನಗರದಗಸೆಯ ಹೊರಗಿರುವ ೨೭ಕಪಾಲಸ್ಥಾನ
ವೆಂಬುವಾ ಗೊಲ್ಗೊಥಾ ಗಿರಿಗೆ. ಬಂದಿಗಳಿಂದ
ಹೊರಿಸಿ ತಂದಾ ಮೂರು ಸಿಲುಬೆಗಳ ನಟ್ಟರಾ
ಗೊಲ್ಗೊಥದ ಶಿಖರದಲ್ಲಿ; ಯೇಸುವಂ ನಡುವೆ ಮೇ
ಣೆಡಬಲದೊಳಾ ಕಳ್ಳರಿಬ್ಬರಂ ಸಿಲುಬೆಗಳಿ

28 ಬರಮೋಡ=ಮಳೆ ಸುರಿಯದ ಮೋಡ.
29 ತಿಂತಿಣಿವರಿದು=ಗುಂಪುಗುಂಪಾಗಿ ಹೋಗುತ್ತಾ.

ದಿಂ ಬರೆಸಿ ಸಿಲುಬೆಯೊಳದಂ ತೂಗಿರೆನೆ, ನೆರೆದ
ಯಾಜಕರ ಮಂದಿ [20]ನಿಬ್ಬೆರಗಾಗಿ ಏನಿದೇ
ನಿಂತು ಬರೆಸಿದೆ? ಯೆಹೂದ್ಯರ ರಾಜನೀ ಯೇಸು
ವೆಂದು ಬರೆಸದೆ, ಯೆಹೂದ್ಯರ ರಾಜ ತಾನೆಂದ
ನೀತನೆಂದನಿತೆ ಬರೆಸಾ !' ಎಂದು ಬೇಡಿಕೊಳೆ,
ಬರೆದುದಂ ಬರೆದೆ ಗೆಯ್ದುದ ಗೆಯ್ದೆನೆಂದವಂ
ಹಿಂಗಡೆಯಿನಿಳಿದು ಆರೋಗಣೆಗೆ ಹೋದಂ

ರಾಣುವೆಯರಿತ್ತ, ಕಾವಲ ಮನೆಗೆ ಯೇಸುವಂ
ಕೊಂಡೊಯ್ದು, ಕಾವಲರ ದಳವೆಲ್ಲ ಸುತ್ತು ನಿಂ
ದಿರಲವನ ಬಟ್ಟೆ ಸೆಳೆತೆಗೆದು, [21]ಕಿಸುಸೇಲೆಯಂ
ಹೊದಿಸಿ, ಮುಳ್ಳಿಂದ ಮಾಡಿದ ಮಕುಟವಂ ಮುಡಿಸಿ.
ಬಲಗೆಯ್ಯೊಳೊಂದು ಬೆತ್ತವನಿತ್ತವನ ಮುಂದೆ
ಮೊಣಕಾಲನೂರುತ 'ಯೆಹೂದ್ಯರರಸನೆ ಸ್ವಸ್ತಿ!'
ಎಂದುಗೊಳ್ಳನೆ ನಕ್ಕು ಮೂದಲಿಸಿ, ಮೊಗದಿ[22] ತೂ
ಪಿರಿದದುವೆ ಬೆತ್ತದಿಂ ಬಡಿಯೆ, ಬಾಸುಳೆಗಳಿಂ[23]
ಪ್ರೇಮದರುಣೋದಯವೊ, ನಿರ್ದೋಷನಿವನೆಂಬ
ಮೂಕಸಾಕ್ಷಿಯೊ ಎನಲು ನೆತ್ತರೊಡಮೂಡಿದೊಡ
ಮವನೊಂದು ಮಾತನೆತ್ತಿಲ್ಲ ! [24]ಮಾ ಎಂದಿಲ್ಲ !
ಕಾಗೆಗಳ [25]ಕೊತ್ತಳಂ ಕುಕ್ಕುವೆಳೆಕುಕಿಲಂತೆ,
ಕೆಂಡಗಳ [26]ಕೋವೆಯಲ್ಲಿ ಕಾವ ಕಾಂಚನದಂತೆ,
ಮಂಜು ಮುಸುಕಿರುವ [27]ಬೈಗಿನ ಬೆಳ್ಳಿಯಂತೆ, ನೋ
ಡೆಲ್ಲ ಹಿಂಸೆಯನಂತು ಸಹಿಸಲವನಿನ್ನವಗೆ
ಹೊದಿಸಿದರುಣಾಂಶುಕುವ ತೆಗೆದವನ ತೊಡಿಗೆಯನೆ
ತೊಡಿಸಿ, ವಧ್ಯಸ್ಥಾನಕಂದೆ ಸಿಲುಬೆಗೆ ಹಾಕ
ಲಿರುವೆರಡು ಕಳ್ಳರೊಂದಿಗೆ ಯೇಸುವಂ ನಡಸಿ

---

20 ನಿಬ್ಬೆರಗಾಗಿ = ತಳವೆಳಗಾಗಿ 21 ಕಿಸುಸೇಲೆ = ಕೆಂಪು ಬಟ್ಟೆ, 22 ತೂಪಿರಿದು = ಉಗುಳಿ. 23 ಬಾಸುಳೆ = ಬಾಸುಂಡೆ, 24 ಮಾ = ಬೇಡ, 25 ಕೊತ್ತಳ = ಹಿಂಡು. 26 ಕೋವೆ = ಕುಲಿಮೆ. 27 ಬೈಗಿನ = ಸಂಜೆಯ. ಬೆಳ್ಳಿ = ನಕ್ಷತ್ರದಂತೆ ಮರೆಯು ಶುಕ್ರ ಗ್ರಹ.

ಕೊಂಡೊಯ್ದರವರು. ನೋಡೆನಿತು ಬಲುಗುಂಪು ! ನೋ
ಡೆನಿತು ಹೆಂಗಸರವನ ಬಳಿವಿಡಿದು ಎದೆಬಡಿದು
ಗೋಳಾಡುತಿರೆ ಕೇಳಿ ಮೊಗದಿರುಹಿ ಯೇಸುವಿಂ
ತೆಂದನ್ನವರ್ಗೆ—'ಯೆರೂಸಲೇಮ ದುಹಿತೆಯರಿರಾ !
ನನಗೆ ಗೋಳಾಡದಿರಿ ; ನಿಮಗಾಗಿ ನಿಮ್ಮ ಮ
ಕ್ಕಳಿಗಾಗಿ ಗೋಳಾಡಿ ! ಇದೋ ಬರುತಲಿವೆ ದಿನಂ,
ಧನ್ಯರೆನಿತಕಟ ಬಂಜೆಯರು ! ಹೆರದಾ ಬಸಿರ್ಗ
ಳೆನಿತು ಧನ್ಯವೊ ! ಧನ್ಯವೆನಿತೊ ಹಾಲೂಡಿಸಿದ
ಮೊಲೆಗಳೆಂಬುವ ದಿನಂ ಬರುತಲಿವೆ ! ಅಂದಿಗೆಲೆ
ಬೆಟ್ಟಗಳೆ ! ನಮ್ಮ ಮೇಲುರುಳಿರೆಲೆ ಗುಡ್ಡಗಳೆ !
ಮುಚ್ಚಿರಕಟಾ ನಮ್ಮನೆಂಬರಿದೊ ಹಸುರೆಲೆಯೊ
ಳಿಂತಾಗೆ ತರಗಲೆಯೊಳೇನಾಗದಿಹುದು !'

* * * *

ಅಂದಿದೊ ವಸಂತಪೂರ್ಣಿಮಿಯ ಭೃಗುವಾರದಾ
ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ ;
ನೋಡೊಂದೆ [2]ಬರಮೋಡ ಬಾನಗಲ ಚಾಚಿ ೨೬ನೋ
ಹನ ಕಾಲದಾ ಪ್ರಲಯಮೇಘವೆನೆ ಮುಚ್ಚಿಹುದು :
ಬೇಗೆಯುಂ ತಡೆಯಲಾಗದು, ಗಾಳಿ ಸೂಸದಿಳೆ
ಯುಬ್ಬಸದೊಳೇದುತಿದೆ, ಮರಗಳಲಿ ಕದಲದೆಲೆ,
ಹಕ್ಕಿಗಳ ಉಸುರಿಲ್ಲ ; ನೆಟ್ಟಿರುಳೊಳಂತೆ ಮನೆ
ಮನೆಯೊಳುಸಿಕಣೆ ಸಂತಮಿರತಕ್ಕ ಜನಪದಂ
ಧಗೆಯ ಹೆಬ್ಬಾವಂತೆ ಹೊರಟು [29] ತಿಂತಿಣಿವರಿದು
ಬಂತು ಶಲಭಸಮೂಹದಂತೆ ಯೇರೂಸಲೇಮ್
ನಗರದಗಸೆಯ ಹೊರಗಿರುವ ೨೭ಕಪಾಲಸ್ಥಾನ
ವೆಂಬುವಾ ಗೊಲ್ಗೊಥಾ ಗಿರಿಗೆ. ಬಂದಿಗಳಿಂದ
ಹೊರಿಸಿ ತಂದಾ ಮೂರು ಸಿಲುಬೆಗಳ ನಟ್ಟರಾ
ಗೊಲ್ಗೊಥದ ಶಿಖರದಲ್ಲಿ; ಯೇಸುವಂ ನಡುವೆ ಮೇ
ಣೆಡಬಲದೊಳಾ ಕಳ್ಳರಿಬ್ಬರಂ ಸಿಲುಬೆಗಳಿ

---

28 ಬರಮೋಡ=ಮಳೆ ಸುರಿಯದ ಮೋಡ.
29 ತಿಂತಿಣಿವರಿದು=ಗುಂಪುಗುಂಪಾಗಿ ಹೋಗುತ್ತಾ.

ಗಿಕ್ಕಿ, ಕೈಕಾಲ್ಗಳಿಗೆ ಮೊಳೆ ಜಡಿದು, ಯೇಹೂದ್ಯ
ರರಸನೀ ನಳನಜರಾಯ ಯೇಸುವೆಂದಾ ಬರೆದ
ಹಲಗೆಯಂ ತಲೆಗಡೆಗೆ ತೂಗಿದರು. ಹದ್ದು ಬಿಗಿ
ವಿಡಿದ ಲಾಪಿಗೆಯಂತೆ, ಪಡುವಣದಿ ಬಿಳಿಯ ಬಿದಿ
ಗೆಯ ತಿಂಗಳಂತೆ, ಬಿಲ್ಲಿಗೆ ತೊಟ್ಟ ಸರಳಂತೆ,
ಮರಣ ವೃಕ್ಷದೊಳಮೃತಫಲದಂತೆ ತೂಗುತಿರೆ,
ತನ್ನ ಬೇನೆಯನಣಂ ಗಣಿಸದವನುಸುರಿದಂ--
ನರದೇಹವೆತ್ತವನಿಗಾ ತನುವ ಗುಣಧರ್ಮ
ವಹ ಬೇನೆ ಇಲ್ಲದಿಹುದೆಂತು? ತಾನಾರ ತನು
ಮನಮನಿನಿಸಾದೊಡಂ ನೋಯಿಸಿಲ್ಲೆಂದು ಸಾ
ವಿರ ಚೇಳ್ಗಳೊಮ್ಮೆಗಕಟಾ ಕಡಿದ ಯಾತನೆಯ
ಸಿಲುಬೆಯೊಳಿಲುರಿಯ ತಣ್ಣನ ತಳೆದು, ತಾಯ ಮೊಗ
ನೋಡೆ ಮಗು ಬೆಸಲಳನೋತು ಸೈರಿಸುವಂತೆ,
ಚೂಣಿಯ ಭಟಂ ಗಾಯದಳಲ ಲೆಕ್ಕಿಸದೆ ಮುಂ
ಗಾದಾಡಿ ಮಡಿದು ಜಯವಡುವಂತೆ, ನರನರಂ
ಗಳಲಿ ಕುದಿಕುದಿವ ವೇದನೆ ಸೋಸಿ, ತನ್ನ ತೊರೆ
ದರ್ಭಕರ ಹಂಬಲಿಸುವ ಮುಮೂರ್ಷು ತಾಯಂತೆ
ತನ್ನ ಕಡಿವವರ್ಗೆ ತಣ್ನೆಳಲೀವ ಮರದಂತೆ,
ತನ್ನಳಲನವರ ಹಂಬಲದಿ ಮರೆತುಸುರಿದಂ--
'ಕ್ಷಮಿಸಿವರನೆಲೆ ತಂದೆ! ತಾವೇನನೆಸಗಿದಪೆ
ವೆಂದರಿಯರಿವರು.' ನೆರೆದವರದಂ ಕೇಳಿ 'ಹಾ!
ನಮಗಾಗಿ ಕ್ಷಮೆಯ ಯಾಚಿಸುವುದಂತಿರಲಿ; ನೀ
ದೇವಸುತನಾಗಿದ್ದರೀ ಸಿಲುಬೆಯಿಂದಿಳಿದು
ಬಾರ ನೋಡುವ!' ಎಂದು [30]ಜಟಕರಿಸೆ, ಯಾಜಕರು
'ಅನ್ಯರಂ ರಕ್ಷಿಸಿದಿವಂ ತನ್ನ ತಾನೆ ರ
ಕ್ಷಿಸಲಾರನಾದನೆ? ಯೆಹೂದ್ಯರರಸಂತೆ! ತಾ
ನಿಳಿತರಲಿ ಸಿಲುಬೆಯಿಂದೊಡನೆ ನಂಬುವೆನಿವನ!
ದೇವರೊಳೆ [31]ಭರವಸಿಗನಂತೆ! ಕಾಂಬೆವು ದೇವ

---

30 ಜಟಕರಿಸು = ಅಣಕಿಸು, ಹೀಯಾಳಿಸು. 31 ಭರವಸಿಗ = ನಂಬಿಕೆಯುಳ್ಳ
ವನು.

ರೀತನಂ ರಕ್ಷಿಸಲಿ! ದೇವಸುತ ತಾನೆಂದ
ನಲ್ಲ?' ಎಂದಣಕಿಸಿದರು.

ಅನಿತರೊಳೆ ಬಿರುಗತ್ತ
ಲೊಂದು ಬಾನೆಲ್ಲವಂ [32]ಬಾಸಣಿಸಿ, ದೇವಸುತ
ನಮೃತನೀ ಮೃತಿನಾಟಕದ ಕಡೆಯ ತೆರೆಯಂತೆ
ಭೂವ್ಯೋಮಗಳ ನಡುವೆ ಮುಸುಕಿದುದು. ಸೂರ್ಯೋಪ
ರಾಗಮೇನಿಂದು ಹುಣ್ಣಿಮೆಯೊಳೆನೆ ನಕ್ಷತ್ರ
ವೊಂದಿಲ್ಲ. ಮಳೆಯ ಕತ್ತಲೆಯೊ? ಕತ್ತಲ ಮಳೆಯೊ?
ಅಲ್ಲಡೆ [33]ನಭೋಗ್ನಿಮುಖಿಯಿಂದುಗುವ ಕಬ್ಬೊಗೆಯೊ?
ಮಿಸ್ರದೊಂಬತ್ತನೆಯ ಮಾರಿ ಶೀತಲೆದೋರಿತೇ?
ಹಗಲ ಮೂರನೆಯ ಜಾಮದೊಳೆ ಹಗಲಿನ ದೀಪ
ವಾರಿತೇನೆಂದು ನೆರೆದವರೆಲ್ಲರೆದೆ ನಡುಗೆ,
ಸಿಲುಬೆಯೊಳೆಲೀ! ಎಲೀ! ಲಮ್ಮಾ ಸಬಕ್ಥಾನಿ?
(ದೇವರೆ! ದೇವರೆ! ಯಾಕೆನ್ನ ಕೈಬಿಟ್ಟೆ?)
ಎಂದು ದಾವೀದ ನೃಪನಂದಿನಾರ್ತಧ್ವಾನ೨೬
ದಿಂದರಚೆ ಯೇಸು, ನಿಂದವರಲ್ಲಿ ಕೆಲವರಿವ
ನೇಲೀಯನಂಶಿ೦ ಕರೆವನೇಲೀಯನೇಂ ಬಂದು
ಕಾದಪನೊ ಕಾಂಬೆವೆನೆ, ಮೇಘನಿರ್ಘೋಷದಿಂ
'ತಂದೆಯೆ! ಮಮಾತ್ಮವಂ ನಿನ್ನ ಕೈಯೊಪ್ಪಿಸುವೆ!'
ಎಂದು ಗಗನದಿ ಯೇಸು ಕಣ್ಣೂರಿ, ತುದಿಬೆಟ್ಟ
ದಿಂ ಕರೆವ ತಾಯೆಡೆಗೆ ಮರಿಜಿಂಕೆ ಜಿಗಿವಂತೆ,
ಸುಗ್ಗಿಯೆಡೆಗಯ್ದುವಾ ಬಾನಕ್ಕಿಯಂತೆ, ದಿನ
ಮುಖದೊಳಿರುಳಿನ ಸೊಡರು ನೇಸರಂಬುಗುವಂತೆ,
ಕ್ಷಿತಿಜದಿಂ ಸಿಡಿದು ಮೇಲ್ನೆಗೆವ ಮಿಂಚಂತೆ, ಯೇ
ಸುವಿನಾತ್ಮಮೊಡನೆ ಬೆಳಕಿನ ಬೀಡಿಗಯ್ದೆ, ಖಿನಿಲು
ನೇಸರುಗಳೆಡೆಗಯ್ದೆ, ಕಣ್ಮುಗಿದು ತಲೆವಾಗಿ,

---

32 ಬಾಸಣಿಸು = ಆಚ್ಛಾದಿಸು, ಮುಚ್ಚು. 33 ನಭೋಗ್ನಿಮುಖಿ = ಆಕಾಶ
ವೆಂಬ ಜ್ವಾಲಾಮುಖಿ.

ತನ್ನ ಪಡೆದ [34]ರವನೊಡೆಯುಂಗೆ ಮರಳೀವಂತೆ
ತನ್ನ ತಂದೆಗೆ ಯೇಸುವಸುವನೊಪ್ಪಿಸಿದಂ.

* * * *

ಗಡಗಡನೆ ಪೊಡವಿ ನಡುಗಿತು, ದುಃಖವಾರ್ತೆಯಂ
ಜಗಕೆಲ್ಲ ಕೇಳಿಸುವ ಮೃತಕದುಂದುಭಿಯಂತೆ,
ನೆರೆದರದೆಯೆದೆ ಭೀತಿಯಿಂದ ಮಾರ್ಮೊಳಗಿದುದು.
ಕಾವಲಿನ ರೋಮಕ ಶತಾಧಿಪತಿ ಕುದುರೆಯಲಿ
ಜೂಗಳಿಸೆ, ಕೆಳಗಿಳಿದು ಸೀಸಕಂ ತೆಗೆದಿವಂ
ದೇವತನಯಂ ಗಡಾ! ಎಂದು ವಿಸ್ಮಯದೊಳಾ
ಹಗಲ ತಿಂಗಳನೆ ಎವೆಯಿಕ್ಕದೀಕ್ಷಿಸಿದಂ.

* * * *

ಮೆಲ್ಲಮೆಲ್ಲನೆ ತೆಗೆದುದಾ ಕತ್ತಲಾ ಮೋಡ,
ಸುಳಿದುದೆಳೆಗಾಳಿ, ಮುಚ್ಚಿದ ಕೋಳಿ ಹೊರಹೊಂಚಿ
ಮುಂಬೆಳಕೊಳಂತೆ ಕೂಗಿತು, ಹಕ್ಕಿಗಳ ಹಿಂಡು
ಗೂಡುಗೂಡಿಂದ ಹೊರಸೂಸಿತರೆಮೇವಿನೊಳೆ
ಕಂಗೆಟ್ಟ ಮಂದೆಯೊಟ್ಟಾಗಿ ಮರಳಿತು ಮನೆಗೆ.
ಅಂತು ಹಗಲಿನ ರಾತ್ರಿ ಪಾಳೆಯಂ ತೆಗೆಯೆ, ಪಡು
ವಣದಿ ರವಿ ಮೂಡಿ, ತನ್ನೆದುರಿನೊಳೆ ಪಡುಮೊಗಂ
ಗೊಂಡು ಧರ್ಮಪತಾಕೆಯಂತೆ ನಡುಸಿಲುಬೆಯಲಿ
ಚಾಚಿದಪರಾರ್ಕನಂ ಕಂಡು ತಾನಸ್ತಮಿಸ
ಲಲ್ಲಿ ನೆರೆದವರೆಲ್ಲ ಕತ್ತಲೆಯ ದಂಡೆಯಿಂ
ಹಿಂಡೆದ್ದ ಕೊಕ್ಕರೆಗಳಂತೆ ಗೊಲ್ಗೊಥದಿಂದ
ಮನೆಗೆ ತೆರಳಿದರಲ್ಲಿ ಸದ್ದಿಲ್ಲ. ಸುಳಿವಿಲ್ಲ.

* * * *

ಮೂಗುಹರಕಾವೊಂದು ಹಳೆಯ ಒತಲೆಬುರುಡೆ ನಡು
ಸಿಲುಬೆಯಡಿಯಿಂ ಜಗವ ಬಾಯ್ಕಿಸಿದು ನಗುತಲಿದೆ.
ಕೆಯ್ಯ ಭಲ್ಲೆಯದೊಬ್ಬನಾ ಜಾಮದ ಪ್ರಹರಿ
ಸಿಲುಬೆಗಳ ಮುಂಗಡೆಯೊಳತ್ತಿತ್ತ ಶತಪದಂ

---

34 ಎರವು = ಎರವಾಗಿ ಪಡಕೊಂಡ ವಸ್ತು.

ಗೆಯ್ದು ತನ್ನಯ ಬಾರಿ ಮುಗಿವ ಹೊತ್ತಂ ಕಾದು
ನಿಮಿಷಗಳನೆಣಿಸುತಿಹನಾದಡಾ ಗಿರಿಯಿಂದ
ಲನತಿದೂರದೊಳೊಂದುದುಂಬರದ ನೆರಳಲ್ಲಿ
ಮೆಯ್ಮರಸಿ ಕುಳಿತಿಹಳು [35]ಕಡೆಮುಗಿಲ ಮಳೆವಿಲ್ಲ
ನೀಕ್ಷಿಸುವ ನವಿಲಂತೆ ನಡಿಸಿಲುಬೆಯೊಳೆ ನಟ್ಟ
ನಯನಗಳ ಗಂಭೀರ ಮುಗ್ದಲದ ಮರಿಯೆ--ದಾವೀದಕುಲಸಿಂ
ದಾದಿತ್ಯನ ನವಪ್ರಬೋಧನದ ಮುಂಗೋಳಿ.
ಗೊಲ್ಗೊಥದ ಹಿಂದಣೆಂದುದಿಸಿದ ಸುಧಾಸೂತಿ
ಬೆಳ್ಗೊಡೆಯನಮೃತನಾ ಮೃತಮೂರ್ತಿಗೆತ್ತಿಹಂ;[34]
ಮುನ್ನ ಕೀರ್ತಿಯ ಹಾಲ ಹೊನಲಂತೆ, ತಾನನ್ನೆ
ಗಂ ಬೀರಿದಕ್ಕರೆಯ ಬಲೆಯಂತೆ, ಬೋಧಿಸಿದ
ನಿತ್ಯಜೀವನದ ಧವಳಿಮೆಯಂತೆ, ತನ್ನಾತ್ಮ
ದಮೃತತತ್ವದಂತೆ ವಿಸಟಂಬರಿಯೆ ಬೆಳದಿಂಗ
ಳೆತ್ತಲುಂ ನಿಷ್ಪಂದಮೆತ್ತಲುಂ ಶಾಂತಂ.

---

[35]ಕಡೆಮುಗಿಲು = ಶಿಂತ್ಯಲ.

# ಟಿಪ್ಪಣಿ

೧. ಯೆಹೂದ್ಯರ (Jews) ಪ್ರಧಾನಯಾಜಕನಾದ ಕಾಯಫನೆಂಬುವನು (Caiaphas).

೨. ದೇವರ ಪ್ರಥಮ ಮಾನವಸೃಷ್ಟಿಯಾದ ಆದಾಮನು (Adam) ಮಾಡಿದ ಮೂಲಪಾಪವು (Original sin) ಯೇಸು ತನ್ನನ್ನು ಬಲಿಯಿತ್ತುದರಿಂದ ಪರಿಹಾರವಾಯಿತು.

೩. ಕೈಸರ (Caesar) ಎಂದರೆ ರೋಮ ಸಾಮ್ರಾಜ್ಯದ (Roman Empire) ಚಕ್ರವರ್ತಿ. ಆಂದಿನವನ ಹೆಸರು ತಿಬೇರಿಯ (Tiberius) ಕೈಸರನೆಂದು (ಕ್ರಿ.ಶ. ೧೪-೩೭) ಪಿಲಾತನು (Pilate) ಆತನ ಪ್ರತಿನಿಧಿಯಾಗಿ ಯೆಹೂದ್ಯ ದೇಶದ (Judea) ಮೇಲಧಿಕಾರಿಯಾಗಿದ್ದನು.

೪. ಪಸ್ಕ (Passover) ಎಂದರೆ ಯೆಹೂದ್ಯರ ಮುಖ್ಯವಾದೊಂದು ಹಬ್ಬ. ಆ ಹಬ್ಬದಂದು ಯೆಹೂದ್ಯರು ಮಡಿಗೆಡದೆ ಶುಚಿವ್ರತರಾಗಿರಬೇಕು.

೫. ರೋಮಕ (Roman) = ರೋಮದೇಶದವನು; ಇಲ್ಲಿ ಪಿಲಾತ.

೬. ಪಿಲಾತನ ನ್ಯಾಯಪೀಠವಾಗಿದ್ದ ಕಲ್ಲುಕಟ್ಟಣೆಗೆ (Pavement) ಇಬ್ರೀಯ (Hebrew) ಭಾಷೆಯಲ್ಲಿ ಗಬ್ಬಥ (Gabbatha) ಎಂದು ಹೆಸರು (John XIX, ೧೪).

೭. ಭೂಲೋಕದಲ್ಲಿ ದೇವರು ಸೃಷ್ಟಿಸಿದ ಏದೆನ್ (Eden) ತೋಟದಲ್ಲಿದ್ದ (Tree of Knowledge) ಜ್ಞಾನದ ಮರ (Genesis II, ೧೭).

೮. ಯೆಹೂದ್ಯರ ಪುರಾಣಗಳಲ್ಲಿ ಹೇಳಿರುವ ಮೇರೆಗೆ ಸೃಷ್ಟಿಯ ಆದಿಯಲ್ಲಿ ಸರ್ಪರೂಪವನ್ನು ತಾಳಿ ಆದ್ಯ ಮನುಷ್ಯನಾದ ಆದಾಮನನ್ನು ದುರ್ಬೋಧಿಸಿ ಪಾಪದಲ್ಲಿ ಕೆಡವಿಸಿದ ಸೈತಾನನೆಂಬ (Satan) ಪಾಪಪುರುಷನು ಅಥವಾ ಅಸುರನು.

೯. ಸಾಯುಜ್ಯ = Communion.

೧೦. Mark IX, ೨೯.

೧೧. ಯೆಹೂದ್ಯ ಎಂದರೂ ಯೂದಾಯ ಎಂದರೂ ಯೆಹೂದ್ಯರ ದೇಶ (Judea).

೧೨. ಹೆಲೇನಾ (Helena) ಸ್ಪಾರ್ಟದ (Sparta) ಅರಸನಾದ ಮೆನೆಲಾಸನ (Menelaus) ರಾಣಿ; ಕ್ಲಿಯೋಪಾತ್ರಾ (Cleopatra) ಐಗುಪ್ತದ (Egypt) ರಾಣಿ (ಕ್ರಿ. ಪೂ. ೬೯-೩೦). ಇವರಿಬ್ಬರೂ ತಂತಮ್ಮ ಕಾಲದ ಪರಮ ಸುಂದರಿಯರೆಂದು ಗಣ್ಯರಾಗಿದ್ದರು.

೧೩. ಮಗ್ದಲದ ಮರಿಯೆ (Mary of Magdala) ಎಂಬುವಳು ಆಗ ಯೆಹೂದ್ಯದಲ್ಲಿದ್ದ ಒಬ್ಬ ಲಾವಣ್ಯವತಿ. ಆಕೆ ಯೇಸುವಿನ ಅನುಯಾಯಿಯಾಗಿದ್ದಳು. (೩೬೯ನೆಯ ಬಂತಿಯನ್ನು ನೋಡಿ.)

೧೪. ಯೋಹಾನನ ಸುವಾರ್ತೆಯಲ್ಲಿ (John I, ೨೯, ೩೬) ಯೇಸುವನ್ನು 'ದೇವರ ಕುರಿಮರಿ' (Lamb of God) ಎಂದಿದೆ. ತನ್ನ ಜೀವವನ್ನು ತೆತ್ತು ಆತನು ಮೂಲಪಾಪವನ್ನು ಪರಿಹರಿಸಿದನೆಂಬ ಕಾರಣ (ಟಿಪ್ಪಣಿ ೨) ಆತನು ಲೋಕದ ಪಾಪವನ್ನು ಹೊತ್ತ ಕುರಿಮರಿ.

೧೫. ಯೆಹೂದ್ಯದಲ್ಲಿರುವ ಒಂದು ಮಹಾ ಸರೋವರ (See of Galilee). ಇದಕ್ಕೆ ತಿಬೇರಿಯ ಸಮುದ್ರ (See of Tiberias)ಎಂದೂ ಹೆಸರಿದೆ.

೧೬. ಯೋರ್ದನ್ (Jordan) ಎಂದರೆ ಯೆಹೂದ್ಯರ ದೊಡ್ಡ ಹೊಳೆ. ಅದು ಮೃತಸಮುದ್ರದಲ್ಲಿ (Dead Sea) ಬೀಳುತ್ತದೆ.

೧೭. ಆದರೆ ಯೇಸು ಕೈಸರನದನ್ನು ಕೈಸರನಿಗೆ ಕೊಡಬೇಕೆಂದು ಹೇಳಿದ್ದಾನೆ. (Luke XX, ೨೫).

೧೮. ರಾಜ ಜಿಘಾಂಸು = ಅರಸನನ್ನು ಕೊಲ್ಲಲೆಳಸುವವನು.

೧೯. ಬರಬ್ಬ (Barabbas) ಎಂಬುವನು ಆಗಣ ನಾಮಾಂಕಿತನಾದ ಒಬ್ಬ ದಸ್ಯು, ದಂಗೆಗಾರ.

೨೦. ಸಿಲುಬೆ (Cross) = ತೂಗುಮರ, ಗಲ್ಲು, (ಸಿರಿಯಕ್ ಭಾಷೆಯಲ್ಲಿ 'ಶ್ಲೀಬೋ', ಅರಬೀ ಭಾಷೆಯಲ್ಲಿ 'ಸಲೀಬ್').

೨೧. ಪಿಲಾತನು ಹೀಗೆ ೩ ಸಲ ಯೆಹೂದ್ಯರನ್ನು ನೋಯಿಸಿದ್ದನು—(೧) ಆತನು ಯೂದಾಯದ ಮೇಲಧಿಕಾರಿಯಾಗುತ್ತಲೆ ಕೈಸರೆಯ್ಯದಿಂದ (Caesarea) ರೋಮಿಾಯ ಸೈನ್ಯದ ಲಾಂಛನಗಳಾದ ಬೆಳ್ಳಿಯ ಹದ್ದುಗಳನ್ನು ಯೆಹೂದ್ಯರ ಮಹಾಪುಣ್ಯಕ್ಷೇತ್ರವಾದ ಯೆರೂಸಲೇಮಿಗೆ (Jerusalem) ತರಿಸಿಕೊಂಡನು; (೨) ಸೊಲೊಮೋನನ ಮಡುಗಳಿಂದ (Pools of Solomon) ಕಾಲುವೆಗಳನ್ನು ತೋಡಿಸುವ ಕೆಲಸವು ಬಹುಜನಕ್ಕೆ ಉಪಯುಕ್ತವೆಂದು ಆತನು ಬಗೆದು ಯೆಹೂದ್ಯರ ಪವಿತ್ರ ಬೊಕ್ಕಸದಿಂದ ಹಣವನ್ನು ತೆಗೆದು ಅದಕ್ಕೆ ವಿನಿಯೋಗಿಸಿದನು; (೩) ಯೆರೂಸಲೇಮಿನಲ್ಲಿ ಯೆಹೂದ್ಯರ ಅರಸನಿದ್ದ ಅರಮನೆಯಲ್ಲಿ ರೋಮಿಾಯ ಕೈಸರನಾದ ತಿಬೇರಿಯನಿಗೆ ಮಿಾಸಲಿಟ್ಟ ಗುರಾಣಿಗಳನ್ನು ತೂಗಹಾಕಿಸಿದನು. ಆತನ ಈ ಅಕೃತ್ಯಗಳಿಂದ ಯೆಹೂದ್ಯರು ಕೆರಳಿ ಕೈಸರ ತಿಬೇರಿಯನಿಗೆ ಆ ಕುರಿತು ಮನವಿ ಮಾಡಿದರು. ಆತನು ಕೂಡಲೆ ಅವನ್ನು ರದ್ದಾಗಿಸಿ, ಇನ್ನು ಅವರ ತಳ್ಳಿಗೆ ಹೋಗದಂತೆ ಪಿಲಾತನನ್ನು ಎಚ್ಚರಿಸಿದನು. (Dean Farrar's *Life of Christ*, Chap. LX.)

೨೨. **But, Rome !'tis thine alone with awful sway**
**To rule mankind and make the world obey**
**(Dryden's Virgil : *Aeneid* VI, 1173-74).**

೨೩. '*Ecce homo*'=Behold the man (John XIX, 5)

೨೪. ನಜರೇತ್ (Nazareth) ಎಂದರೆ ಯೆಹೂದ್ಯರಲ್ಲಿಯ ಒಂದು ಊರು. ಯೇಸು ಆ ಊರಿನ ಯೋಸೇಫನೆಂಬ ((Joseph) ಒಬ್ಬ ಬಡಗಿಯ ಮಗನು.

೨೫. ಗ್ರೀಕ್ (Greek), ಲಾತಿನ್ (Latin) ಮತ್ತು ಇಬ್ರೀಯ (Hebrew) ಬರೆಹಗಳು.

೨೬. ಯೆಹೂದ್ಯರ ಅತ್ಯಂತ ಹಿಂದಣ ಪೂರ್ವಿಕನಾದ ನೋಹ (Noah) ಎಂಬವನ ಕಾಲದಲ್ಲಿ ಜಗತ್ತಿನಲ್ಲಿ ಆದ ಜಲಪ್ರಳಯ (Genesis VII, ೧೭-೨೪)

೨೭. ಗೊಲ್ಗೊಥಾ (Golgotha) ಎಂಬ ಇಬ್ರೀಯ ಭಾಷೆಯ ಶಬ್ದದ ಅರ್ಥ ತಲೆಬುರುಡೆಯ ಸ್ಥಳ (John XIX, ೧೭) ಎಂದು. ಅದೇ ಅರ್ಥದಲ್ಲಿ ಅದನ್ನು ಲಾತೀನ್ ಭಾಷೆಯಲ್ಲಿ ಕಲ್ವರಿ (Calvary) ಎನ್ನುತ್ತಾರೆ. (Luke XXIII, ೩೩.)

೨೮. ದೇವರು ಐಗುಪ್ತದಲ್ಲಿ (Egypt) ಸೆರೆಯಾಳುಗಳಾಗಿದ್ದ ಯೆಹೂದ್ಯರನ್ನು ಅಲ್ಲಿಂದ ಹೊರತರುವರೆ ಅಲ್ಲಿಗೆ ಕಳುಹಿಸಿದ ೧೦ ಮಹಾಮಾರಿಗಳಲ್ಲಿ ೯ನೆಯದು ೩ ದಿನಗಳ ಕಗ್ಗತ್ತಲೆ (Exodus X, ೨೨).

೨೯. ಯೆಹೂದ್ಯರ ಅರಸನಾದ ದಾವೀದನ (David) ಒಂದು ಕೀರ್ತನೆಯ (Psalms XXII, ೧) ಮೊದಲನೆಯ ಸೊಲ್ಲು.

೩೦. ಏಲೀಯನು (Elijah or Elias) ಯೆಹೂದ್ಯರ ಒಬ್ಬ ಶ್ರೇಷ್ಠನಾದ ಪ್ರವಾದಿ (Prophet).

೩೧. ನಿಲುನೇಸರುಗಳೆಡೆ=ಉದಯಾಸ್ತಗಳಿಲ್ಲದೆ ಸೂರ್ಯನು ನಿಂತಲ್ಲೇ ನಿಂತಿರುವ ಪ್ರದೇಶ, ಅಂದರೆ ಸ್ವರ್ಗ.

೩೨. ಆಲ್ಬರ್ಟ್ ಡೂರರ್ (Albert Durer, ಕ್ರಿ. ಶ. ೧೪೭೧-೧೫೨೮) ಎಂಬ ಜರ್ಮನಿಯ ಪ್ರಸಿದ್ಧ ಚಿತ್ರಕಾರನೂ ದಾರು-ದಂತ-ಶಿಲಾ-ಲೋಹ ಶಿಲ್ಪಿಯೂ ಮಾಡಿದ ಸಿಲುಬೆಯಲ್ಲಿಯ ಯೇಸುವಿನ ಚಿತ್ರದಲ್ಲಿ ಯೇಸುವಿನ ಕಾಲ ಬಡುದಲ್ಲಿ ಒಂಧು ತಲೆಯ ಡವುಗೆ ಇದೆ. ಅದನ್ನು ಕಂಡೇ ಆಂಗ್ಲ ಕವಿ ಟೆನ್ನಿಸನನು (Tennyson) ತನ್ನ '*In Memoriam*' ಎಂಬ ಕಾವ್ಯದಲ್ಲಿ ಹೀಗೆಂದಿರುತ್ತಾನೆ—

... and lo, thy foot
Is on the skull which thou hast made.

೩೩. ಯೆಹೂದ್ಯರ ಅರಸರಲ್ಲಿ ಶ್ರೇಷ್ಠವಾದ ದಾವೀದನ (David) ವಂಶದಲ್ಲಿ ಯೇಸು ಜನಿಸಿದನೆಂದು ತಿಳಿಯುತ್ತದೆ (Matthew, I ೧).

೩೪. ಯೇಸುವನ್ನು ಸಿಲುಬೆಗೆ ಹಾಕಿದ ಶುಕ್ರವಾರದ ಸಂಜೆಯಿಂದ ಸಬ್ಬತು (Sabbath) ಅಂದರೆ ವಿಶ್ರಾಂತಿಯ ದಿನ ಎಂಬ ಶನಿವಾರ ಆರಂಭಿಸುವುದರಿಂದ, ಅಂದು ಆ ಶವಗಳನ್ನು ಸಿಲುಬೆಗಳಲ್ಲಿ ಇರಗೊಡಿಸಲಾರದೆ, ಆ ಸಂಜೆಗೆ ಮುಂಚೆಯೇ ಅವನ್ನು ಇಳಿಸಿದರೆಂದು ಸುವಾರ್ತೆಗಳಲ್ಲಿ ಹೇಳಿದೆ. ಆ ಕಾರಣ ಅಂದಿನ ಚಂದ್ರೋದಯವಾದ ಮೇಲೂ ಯೇಸುವಿನ ಕಳೇವರ ಸಿಲುಬೆಯಲ್ಲಿ ಇತ್ತೆಂಬ ಈ ಕತೆಯಲ್ಲಿಯ ಹೇಳಿಕೆಯನ್ನು ಕವಿಸಮಯವೆಂದು ಭಾವಿಸಬೇಕು.

# ಮುನ್ನುಡಿ

---

ಇದು ನನ್ನ ಗೊಲ್ಗೊಥದ ಜತೆಯ ಕಾವ್ಯ. ಇದನ್ನು ರಚಿಸಬೇಕೆಂದು ಹಲವು ವರ್ಷಗಳ ಹಿಂದಿನಿಂದಲೇ ಬಗೆದಿದ್ದೆನಾದರೂ, ಒಂದಲ್ಲ ಒಂದು ಎಡರು ತಟ್ಟಿ ಆ ಕೋರಿಕೆಯನ್ನು ಇದುವರೆಗೆ ನೆರವೇರಿಸಲಾಗಲಿಲ್ಲ.

ಇದನ್ನು ರಚಿಸುವಲ್ಲಿ ಸಹಜವಾಗಿ ಬೌದ್ಧಧರ್ಮಗ್ರಂಥವಾದ ಪಾಲಿ ಭಾಷೆಯ ಮಹಾಪರಿನಿಬ್ಬಾನ ಸುತ್ತ (ಮಹಾಪರಿನಿರ್ವಾಣ ಸೂತ್ರ)ವನ್ನು ಆಧರಿಸುತ್ತೇನೆ. ಆದರೆ ಆ ಸೂತ್ರದಲ್ಲಿ ಬುದ್ಧನ ಪರಿನಿರ್ವಾಣದ ಕಥೆಯಾದರೊ ಆ ಮಹಾಘಟನೆಗೆ ಕೆಲಕಾಲದ ಹಿಂದಿನಿಂದ ಪ್ರಾರಂಭಿಸಿ ಅದಾದ ಬಳಿಕಲೂ ಕೆಲ ದಿನಗಳಿಗೆ ಮುಂದುವರಿಯುವುದರಿಂದ, ಅದೊಂದೇ ದಿನದ ಕಥೆಯುಳ್ಳ ಈ ಕಾವ್ಯಕ್ಕೆ ತಕ್ಕಂತೆ ಆ ಘಟನೆಯಂದಿನ ಕಥೆಯನ್ನು ಒಳಕೊಂಡಿರುವ (IV. ೧೯೦ ರಿಂದ VI. ೨೦ರ ವರೆಗಣ) ಭಾಗವನ್ನು ಆ ಸೂತ್ರದಿಂದ ಇದರಲ್ಲಿ ಆಯ್ದುಕೊಂಡಿದೆ. ಆದರಲ್ಲಾದರೂ ಈ ಕಾವ್ಯದ ಮಟ್ಟಿಗೆ ಅಸಂಗತವೆನಿಸಿದ ಆಯಾ ಕೆಲವು ಮಾತುಕಥೆಗಳನ್ನು ವಿಸರ್ಜಿಸಿ, ಈ ಕಾವ್ಯದಲ್ಲಿ ಸಂದರ್ಭೋಚಿತವಾಗಿ ಅಲ್ಲಲ್ಲಿ ಬುದ್ಧನ ಧರ್ಮದೇಶನೆ ಬಾರದಿದ್ದರೆ ಇದೊಂದು ಅಪ್ಪಟ ಬೌದ್ಧ ಕಾವ್ಯವೆನಿಸಲಾರದ ಕಾರಣ, ಆ ತಕ್ಕ ಜೀವಕಳೆ ಇದರಲ್ಲಿ ಮಿಸುಕಾಡುವಂತೆ ಆ ಸೂತ್ರದಲ್ಲಿ ಇಲ್ಲದ ಕೆಲವು ಅಂಶಗಳನ್ನು ಇತರ ಬೌದ್ಧ ಗ್ರಂಥಗಳಿಂದ ಈ ಕಾವ್ಯದಲ್ಲಿ ಇಸಕೊಂಡದೆ. ಹಾಗೆ ಕೂಡಿಸಿಕೊಂಡ ಉಪದೇಶಗಳನ್ನು ಎಲ್ಲೆಲ್ಲಿಂದ ಎತ್ತಿಕೊಂಡದೆಂದು ಟಿಪ್ಪಣಿಯಲ್ಲಿ ಆಯಾ ಯಥಾಸ್ಥಾನದಲ್ಲಿ ಸೂಚಿಸಿದೆ.

ನನ್ನ ಗೊಲ್ಗೊಥದ ಪ್ರಥಮ ಮುದ್ರಣದಲ್ಲಿಯೂ ನನ್ನ ಹೆಬ್ಬೆರಳಿನಲ್ಲಿಯೂ ಆಯಾ ಕೃತಿಯ ಕಥಾವಸ್ತುವನ್ನು ಸಂಗ್ರಹಿಸಿಲ್ಲದ ಕೊರತೆಯ ಕಡೆಗೆ ಗೆಳೆಯರೊಬ್ಬರು ಗಮನವನ್ನು ಸೆಳೆದಿರುವುದರಿಂದ, ಆ ನ್ಯೂನತೆಯನ್ನು ನೀಗಾಡಿಸುವ ಬಗ್ಗೆ ಈ ಕಾವ್ಯದ ಕಥಾಸಾರವನ್ನು ಇಲ್ಲಿ ಸಂಕ್ಷೇಪವಾಗಿ ಹೇಳುತ್ತೇನೆ.

ಕಪಿಲವಸ್ತು ಎಂಬ ಚಿಕ್ಕದೊಂದು ಪ್ರಾಯಶಃ ಮಹಾಜನಸತ್ತಾತ್ಮಕವಾದ (republic) ರಾಜ್ಯದ ಒಡೆಯನಾದ ಶಾಕ್ಯವಂಶದ ಶುದ್ಧೋದನನ ಹಿರೇ ಹೆಂಡತಿಯಾದ ಮಾಯಾದೇವಿಯ ಬಸಿರಲ್ಲಿ ಭಾವಿ ಬುದ್ಧನು ಲುಂಬಿನೀ ವನದಲ್ಲಿ ಕ್ರಿ. ಪೂ. ೫೬೧ ಮಾರ್ಚಿ ೩೦ನೆಯ ತಾರೀಕು ಶುಕ್ರವಾರ ವೈಶಾಖಿ ಅಂದರೆ ವೈಶಾಖಿ ಹುಣ್ಣಿಮೆಯಂದು ಜನ್ಮವೆತ್ತಿದನು.

ಸೋ ಬೋಧಿಸತ್ತೋ............ಜಾತೋ
ಸಕ್ಯಾನಂ ಗಾಮೇ ಜನಪದೇ ಲುಂಬಿನೆಯ್ಯೇ ॥೫॥[1]

ಅವನು ಹುಟ್ಟಿದ ೭ನೆಯ ದಿನದಲ್ಲಿ ತಾಯಿ ಕಾಲವಾದಳು. ಅವನ ತಾಯಿಯ ತಂಗಿಯೂ ಅವನ ಮಲತಾಯಿಯೂ ಆದ ಪ್ರಜಾಪತಿ ಗೌತಮಿ ಅವನನ್ನು ಬೆಳಸಿದಳು. ಪ್ರಾಪ್ತವಯಸ್ಕನಾಗುತ್ತಲೇ ಆತನಿಗೆ ಯಶೋಧರೆ ಎಂಬ ರಾಜಕನ್ನೆಯೊಡನೆ ವಿವಾಹವಾಗಿ, ಅವರಿಗೆ ರಾಹುಲನೆಂಬ ಮಗನು ಹುಟ್ಟಿದನು. ಮಗು ಹುಟ್ಟಿದ ತುಸುಕಾಲದಲ್ಲಿ ಆತನು

ಕಾಮೇಸ್ವಾದೀನವಂ ದಿಸ್ವಾ ನೆಕ್ಖಮ್ಮಂ ದಟ್ಟು ಖೇಮತೋ ॥೨೦॥[2]

ಅಂದರೆ ಇಂದ್ರಿಯೋಪಭೋಗಗಳಲ್ಲಿ ದುಃಖವನ್ನೂ ಸಂಸಾರತ್ಯಾಗದಲ್ಲಿ ಸುಖವನ್ನೂ ಕಂಡು, ಅದರೊಂದಿಗೆ ಜನ್ಮ, ಜರೆ, ರುಜೆ, ಮರಣ ಶೋಕ ಇವುಗಳಿಂದ ಉಂಟಾಗುವ ಹಾನಿಯನ್ನೂ ಮನನಿಸಿ, ಇನ್ನು ಅವುಗಳಿಂದ ಸಂಬದ್ಧನಾಗಿದ್ದು ಹಾಗೆಯೇ ತಾವೂ ಸಂಬದ್ಧರಾಗಿರುವ ಪುತ್ರದಾರಾದಿಗಳ ಬೆನ್ನು ಬಿದ್ದಿರುವುದು ಸರಿಯಲ್ಲ, ತಾನಿನ್ನು ಅಜಾತ, ಅಜರ, ಅರುಜ ಅಮರ ಹಾಗೂ ಅಶೋಕವಾದ ಯಾವ ಪರಮಶ್ರೇಷ್ಠವಾದ ನಿರ್ವಾಣಪದವಿದೆಯೊ ಅದನ್ನು ಶೋಧಿಸುವೆನೆಂದು ತನ್ನ ೨೯ನೆಯ ವರ್ಷದಲ್ಲಿ ಮನೆಯಿಂದ ಹೊರಟು ಹೋಗಿ,

ಅಬ್ಭೋಕಾಸೋ ಚ ಪಬ್ಬಜ್ಜಾ ಇತಿ ದಿಸ್ವಾನ ಪಬ್ಬಜಿ ॥೨॥[3]

ಅಂದರೆ ಬಯಲಿನ ಬಾಳ್ವೆ (open-air life) ಯಾದ ಪ್ರವ್ರಜ್ಯೆಯನ್ನು ಕೈಕೊಂಡನು.

ಆ ಬಳಿಕ ಆತನು ಊರಿಂದ ಊರಿಗೆ ಹೋಗುತ್ತಾ ಕೊನೆಗೆ ಗಯಾ ಕ್ಷೇತ್ರದ ಬಳಿಯ ನೇರಂಜರೆ ಎಂಬ ನದಿಯ ತಡಿಯಣ ಉರುವೇಲೆ ಎಂಬಲ್ಲಿಗೆ ಬಂದು, ಅಲ್ಲಿ ನಿರ್ವಾಣವನ್ನು ಉದ್ದೇಶಿಸಿ ಧ್ಯಾನಾಸಕ್ತನಾಗಿದ್ದಾಗ, ತನ್ನನ್ನು ೭ವರ್ಷ ಅಡಿಗಡಿಗೆ ಕಾಡಿದ--

ಸತ್ತ ವಸ್ಸಾನಿ ಭಗವಂತಂ ಅನುಬಂಧಿಂ ಪದಾಪದಂ ॥೨೨॥[4]

ಪಾಪಪುರುಷನಾದ ನಮುಚಿಯೂ ಎಂಬ ಮಾರನನ್ನು ಗೆದ್ದು, ತನ್ನ ೩೫ನೆಯ ವರ್ಷ ತುಂಬಿ ೩೬ನೆಯ ವರ್ಷ ತೊಡಗುವ ಕ್ರಿ. ಪೂ. ೫೨೮

---

೧ ಸುತ್ತನಿಪಾತದ ನಾಳಕ ಸುತ್ತ.
೨ ಅದರದೇ ಪಬ್ಬಜ್ಜಾಸುತ್ತ.
೩ ಅದೇ ಪಬ್ಬಜ್ಜಾಸುತ್ತ.
೪ ಸುತ್ತನಿಪಾತದ ಪದಾನಸುತ್ತ.

ಏಪ್ರಿಲ್ ೩ನೆಯ ತಾರೀಖು ಬುಧವಾರದ* ವೈಶಾಖಿಯ ಅಂದರೆ ವೈಶಾಖ ಹುಣ್ಣಿಮೆಯ ನಿಶೀಥದಲ್ಲಿ ಆರ್ಯ ಅಷ್ಟಾಂಗಿಕ ಮಾರ್ಗವೆಂಬ ಧರ್ಮ ಮಾರ್ಗವನ್ನು ಕಂಡು ಹಿಡಿದು ತಾನು ಬುದ್ಧನಾದನು, ಸಮ್ಮಾಸಂಬುದ್ಧನಾದನು. ಅನಂತರ ಅಲ್ಲಿಂದ ಕಾಶಿಗೆ ಹೋಗಿ ಅಲ್ಲಿ ಕೆಲ ವರ್ಷಗಳ ಹಿಂದೆ ತನ್ನ ಜತೆಗಾರರಾಗಿದ್ದ ಭಿಕ್ಷುಗಳಿಗೆ ಆ ಮಾರ್ಗವನ್ನು ಉಪದೇಶಿಸಿದನು. ಆ ಉಪದೇಶಕ್ಕೆ ಧರ್ಮಚಕ್ರಪ್ರವರ್ತನ ಎಂದು ಹೆಸರು. ಲೋಕಪ್ರಥಿತವಾದ ಆ ಉಪದೇಶವು ಬೌದ್ಧ ಧರ್ಮ ಗ್ರಂಥಗಳಲ್ಲಿ ಧಮ್ಮಚಕ್ಕಪ್ಪವತ್ತನ ಸುತ್ತ[5] ಎಂದು ಹೆಸರಾಗಿದೆ. ಆಮೇಲೆ ೪೫ವರ್ಷ ಊರೂರನ್ನು ಸುತ್ತಾಡುತ್ತ, ತನ್ನ ಧರ್ಮವನ್ನು ಅಲ್ಲಲ್ಲಿ ಬೋಧಿಸುತ್ತಾ, ಕಾಶಿ, ರಾಜಗೃಹ, ಶ್ರಾವಸ್ತಿ, ಕೌಶಾಂಬಿ ಮೊದಲಾದ ನಗರಗಳಲ್ಲಿ ಆಯಾ ವರ್ಷಾ ಕಾಲವನ್ನು ಕಳೆಯುತ್ತ ಕೊನೆಗೆ ಪಾವೆಗೆ ಬಂದನು.

ಪಾವೆಯಲ್ಲಿ ಬುದ್ಧನು ತನ್ನ ೮೦ನೆಯ ವರ್ಷ ತುಂಬುವ ಒಂದೆರಡು ದಿನಗಳ ಮುಂಚೆ ಚುಂದನೆಂಬ ಕಮ್ಮಾರನ ಮನೆಯಲ್ಲಿ ಬಡಿಸಿದ 'ಸೂಕರ ಮದ್ದವ'ವನ್ನು ಉಂಡನು. ಸೂಕರ ಮದ್ದವವೆಂದರೆ ಇದುವರೆಗೆ ಕಾಡು ಹಂದಿಯ ಒಣಮಾಂಸ (dried boar's flesh) ಎಂದೇ ಬಗೆಯಲ್ಪಡುತ್ತಿದ್ದರೂ, ಈಗ ಅದು ಮಾಂಸವೇ ಅಲ್ಲ, ಯಾವೊಂದು ಬಗೆಯ ಅಣಬೆ (fungus), ಅತಏವ ಶಾಕ ಪದಾರ್ಥವೆಂದು ಗೊತ್ತಾಗಿದೆ.[6] ಅಲ್ಲಿಂದ ಆತನಿಗೆ ದುಃಸಹವಾದ ಬಸುಗುತ್ತ ಅಂದರೆ ಆಮಶಂಕೆ ತೊಡಗಿ, ತನ್ನ ೮೦ನೆಯ ವರ್ಷ ತುಂಬುವ--

ಆಸೀತಿಕೋ ಮೇ ವಯೋ ವತ್ತತಿ[7] —

ವೈಶಾಖ ಪೂರ್ಣಿಮೆಯ ಉಷಃಕಾಲದಲ್ಲಿ, ಅಂದಿಗೆ ೪೫ ವರ್ಷಗಳ ಹಿಂದೆ ಉರುವೇಲೆಯಲ್ಲಿಯೂ ೩ ತಿಂಗಳ ಹಿಂದೆ ವೈಶಾಖಿಯಲ್ಲಿಯೂ ತನಗೂ ಮಾರನಿಗೂ ಆದ ಮಾತುಕಥೆಯನ್ನು ಭಿಕ್ಷುಗಳಿಗೆ ಅರುಹಿ ಅಂದಿನ ರಾತ್ರಿಯಲ್ಲಿ ತಾನು ಪರಿನಿರ್ವಾಣ ಹೊಂದುವನೆಂದೂ ಅವರಿಗೆ ತಿಳುಹಿ, ಹೇಗೂ ಆಸತ್ತು ಬೇಸತ್ತು ಪಾವೆಯಿಂದ ಹೊರಟು ಕುಶಿನಾರದ ಹಾದಿಹಿಡಿದನು.

---

೫. ಈ ಕಾವ್ಯದ ೫೪೭ ರಿಂದ ೫೬೫ ವರೆಗಣ ಬಂತಿಗಳಲ್ಲಿ ಆ ಸುತ್ತವನ್ನು ಸಂಗ್ರಹಿಸಿದೆ.

೬. *Annals of the Bhandarkar Oriental Research Institute*, Silver Jubilee Volume 1942. ಪು. 127-133.

೭. ಮಹಾಪರಿನಿಬ್ಬಾನಸುತ್ತ, II. 25.

ದಾರಿಯಲ್ಲಿ ತನ್ನ ಅಕ್ಕರೆಯ ಶಿಷ್ಯನಾದ ಆನಂದನಿಂದ ನೀರು ತರಿಸಿಕೊಂಡು ಕುಡಿದು ಒಂದು ಮರದ ಬುಡದಲ್ಲಿ ಕುಳಿತುಕೊಂಡಿದ್ದಾಗ, ಆ ಹಾದಿಯಾಗಿ ಹೋಗುತ್ತಿದ್ದ ಪುಕ್ಕಸನೆಂಬ ಮಲ್ಲನು ಬುದ್ಧನು ಅಲ್ಲಿ ತಂಗಿರುವನೆಂದು ಅರಿತು, ಆತನಿದ್ದಲ್ಲಿಗೆ ಬಂದು, ಆತನಿಂದ ಧರ್ಮೋಪದೇಶ ಹೊಂದಿ ಆತನಿಗೆ, ೨ ಹೊಂಬಟ್ಟೆಗಳನ್ನು ಕಾಣಿಕೆಯಾಗಿತ್ತು, ಆತನೆಂದ ಮೇರೆಗೆ ಅವಲ್ಲಿ ಒಂದನ್ನು ಆತನಿಗೂ ಮತ್ತೊಂದನ್ನು ಆನಂದನಿಗೂ ಹೊದಿಸಿ ಅವನನ್ನು ಬೀಳ್ಕೊಂಡು ಮುಂದೆ ಹೋದನು. ಬುದ್ಧನು ಅಲ್ಲಿಂದ ಮುಂದುವರಿದು ಕಕುತ್ಥಾ ನದಿಯಲ್ಲಿ ಮಿಂದು, ಮಗ್ಗುಲಲ್ಲಿದ್ದ ಆವ್ರುವನವನ್ನು ಹೊಕ್ಕು ಅಲ್ಲಿ ಕೊಂಚ ವಿಶ್ರಮಿಸುತ್ತಿದ್ದಾಗ, ಚುಂದನು ಬಡಿಸಿದ ಸೂಕರ ಮದ್ದವವು ತನ್ನ ಕೊನೆಯ ತುತ್ತಾಯಿತೆಂದು ಆತನನ್ನು ದೂರದಿರಿ, ಆದರ ಫಲವು ಎಷ್ಟು ಮೇಲಾಗಿದೆ ಎಂದು ಭಿಕ್ಷುಗಳಿಗೆ ಬೋಧಿಸಿ, ಅಲ್ಲಿಂದ ಮುನ್ನಡೆದು ಅಂದಿನ ಇಳಿಹೊತ್ತಿನಲ್ಲಿ ಗಣರಾಜ್ಯವಾದ (republic) ಕುಶಿನಾರದಲ್ಲಿರುವ ಮಲ್ಲರ ಸಾಲವನಕ್ಕೆ ಹೋಗಿ ಅಲ್ಲಿ ಉತ್ತರ ಶೀರ್ಷವಾಗಿ ಮಲಕೊಂಡವನು ಮತ್ತೆ ಏಳಲಿಲ್ಲ.

ಸಾಲವನದಲ್ಲಿ ಬುದ್ಧನು ಹಾಗೆ ಮಲಗಿದ್ದಾಗ, ಆನಂದನು ಕೇಳಿದ ಕೆಲವು ಪ್ರಶ್ನೆಗಳಿಗೆ ಆತನು ಉತ್ತರವಿತ್ತು, ಸದರ್ಥದಲ್ಲಿ ಪ್ರವರ್ತಿಸಬೇಕೆಂದು ಭಿಕ್ಷುಗಳಿಗೆ ಪ್ರಬೋಧಿಸಿ, ತನ್ನ ಪರಿನಿರ್ವಾಣಕ್ಕೆ ಕುಶಿನಾರವೇ ಯಥೋಚಿತವಾದ ಸ್ಥಾನವೆಂದು ಆನಂದನನ್ನು ಸಮಜಾಯಿಸಿ, ಅದು ಅಂದಿನ ರಾತ್ರಿಯಲ್ಲಿ ಆಗಲಿಕ್ಕಿದೆ ಎಂದು ಅಲ್ಲಿಯ ಮಲ್ಲರಿಗೆ ಅರುಹಿ ಬಾರೆಂದು ಆತನನ್ನು ಆ ಸಂಜೆ ಅವರಲ್ಲಿಗೆ ಪ್ರೇಷಿಸಿದನು. ಆನಂದನು ಅವರಿಗೆ ಹಾಗೆ ತಿಳಿಸುತ್ತಲೆ ಅವರೆಲ್ಲರು ಗೋಳಾಡಿ ಬುದ್ಧನಿದ್ದಲ್ಲಿಗೆ ಬಂದು ಆತನನ್ನು ವಂದಿಸಿ, ಆತನು ಮಾಡಿದ ಧರ್ಮೋಪದೇಶವನ್ನು ಕೇಳಿ ಆತನನ್ನು ಬೀಳ್ಕೊಂಡು ಮರಳಿದರು.

ಆಗ ಕುಶಿನಾರದಲ್ಲಿದ್ದ ಸುಭದ್ರನೆಂಬ ಪರಿವ್ರಾಜಕನು ಬುದ್ಧನು ಅಂದೇ ರಾತ್ರಿ ಪರಿನಿರ್ವಾಣವಯುವನೆಂದು ಕೇಳಿ, ಆತನ ದರ್ಶನಾಕಾಂಕ್ಷಿಯಾಗಿ ಸಾಲವನಕ್ಕೆ ಬಂದು. ತನಗೊಮ್ಮೆ ಬುದ್ಧನನ್ನು ಕಾಣಿಸಬೇಕೆಂದು ಆನಂದನೊಡನೆ ಯಾಚಿಸಿದುದಕ್ಕೆ ಮರುನುಡಿಯಾಗಿ ಆನಂದನು ಬುದ್ಧನು ತೀರ ದಣಿದಿರುವ ಕಾರಣ ಅದು ಸಲ್ಲದೆಂದು ಅವರ ಮಾತುಗಳನ್ನು ಆಲಿಸಿದ ಬುದ್ಧನು ಸುಭದ್ರನನ್ನು ತನ್ನ ಬಳಿಗೆ ಬರಿಸಿಕೊಂಡು, ಆತನಿಗೆ ಧರ್ಮದೇಶನೆಯನ್ನಿತ್ತು ಆತನ ಬೇಡಿಕೆಯ ಮೇರೆಗೆ ಆತನಿಗೆ ಆನಂದನಿಂದ ಪ್ರವ್ರಜ್ಯೆಯನ್ನು ಕೊಡಿಸಿ ಆತನನ್ನು ತನ್ನ ಕೊನೆಯ ಸಾಕ್ಷಾಚ್ಛ್ರಾವಕನಾಗಿ

ಭಿಕ್ಷುಸಂಘದಲ್ಲಿ ಸೇರಿಸಿಕೊಂಡನು.

ಅನಂತರ ಬುದ್ಧನು ಈ ದೇಹವು ನಾಶಕ್ಕೆ ಈಡಾಗಿದೆ, ಸಾವಧಾನದಿಂದ ಉದ್ಯೋಗಿಸಿರಿ ! ಎಂದು ಭಿಕ್ಷುಗಳಿಗೆ ತನ್ನ ಕೊನೆಯ ಮಾತನ್ನು ಹೇಳಿ ಮುಗಿಸಿದವನೇ ಆತನು ಕ್ರಮಶಃ ಪ್ರಥಮದಿಂದ ಚತುರ್ಥದವರೆಗಣ ಧ್ಯಾನ್ಯಗಳನ್ನೂ ಅಲ್ಲಿಂದ ವಿವಿಧಾಯತನಗಳನ್ನೂ ಸಮಾಪದಿಸಿ, ಸಂಜ್ಞಾ ನಿರೋಧ ಸಮಾಧಿಯಲ್ಲಿದ್ದು, ಅಲ್ಲಿಂದ ಮರಳಿ ಅನುಕ್ರಮವಾಗಿ ಚತುರ್ಥ ದಿಂದ ಪ್ರಥಮದವರೆಗಣ ಧ್ಯಾನಗಳನ್ನು ಸಮಾಪದಿಸಿ, ಅಲ್ಲಿಂದಲೂ ಮರಳಿ ದ್ವಿತೀಯದಿಂದ ಚತುರ್ಥದವರೆಗಣ ಧ್ಯಾನಗಳನ್ನು ಸಮಾಪದಿಸಿ, ಆ ವೈಶಾಖಿಯ ಅಂದರೆ ಕ್ರಿ. ಪೂ. ೫೦೧ ಏಪ್ರಿಲ್ ೧೫ನೆಯ ತಾರೀಕು ಕುಜವಾರದಂದಿನ* ವೈಶಾಖ ಪೂರ್ಣಿಮೆಯ ರಾತ್ರಿಯ ಕೊನೆಯ ಜಾವದಲ್ಲಿ ಭಗವಂತನು ಪರಿನಿರ್ವಾಣ ಹೊಂದಿದನು.

ಒಡನೆಯೇ ಭೂಕಂಪವಾಯಿತು, ದೇವದುಂದುಭಿ ಮೊಳಗಿತು, ಮೇಘ ನಿರ್ಘೋಷವಾಯಿತು. ವಿದ್ಯುದಾವಿರ್ಭಾವವಾಯಿತು, ಮುಹೂರ್ತಮಾತ್ರಕ್ಕೆ ಧಾರಾಸಂಪಾತವೂ ಆಯಿತು. ಆಗ್ಗೆ ಸಹಂಪತಿ ಬ್ರಹ್ಮನೂ ದೇವೇಂದ್ರ ಶಕ್ರನೂ ಭಿಕ್ಷುಗಳಾದ ಅನುರುದ್ಧನೂ ಆನಂದನೂ ಆ ಮಹಾಘಟನೆಯನ್ನು ಕುರಿತು ಆಯಾ ಗಾಥೆಯನ್ನು ಉದ್ಗರಿಸಿದರು. ಆ ಬಳಿಕ ಆ ಭಿಕ್ಷು ಗಳಿಬ್ಬರೂ ಮಿಕ್ಕ ರಾತ್ರಿಯನ್ನು ಧರ್ಮಕಥಾಪ್ರಸಂಗದಲ್ಲಿ ಕಳೆದರು.

ಈ ಕಾವ್ಯವನ್ನು ರಚಿಸಲಿಕ್ಕೆ ಅವಶ್ಯಕವಾದ ಪಾಲಿಭಾಷೆಯ ಮಹಾಪರಿ ನಿಬ್ಬಾನಸುತ್ತವನ್ನು ನನಗೆ ಎರವಿತ್ತ ಬಗ್ಗೆ ಬೆಂಗಳೂರಿನ ಪಾಲಿ ವಿದ್ವಾನ್ ಶ್ರೀ ಜಿ. ಪಿ. ರಾಜರತ್ನಂರಿಗೆ ತುಂಬ ಕೃತಜ್ಞನಾಗಿರುತ್ತೇನೆ.

ಇತಿ ಶಮ್

ಮಂಜೇಶ್ವರ
ಸರ್ವಜಿತ್ ಸಂ॥ ವೈಶಾಖ
೫ ಮೇ ೧೯೪೭

ಗೋವಿಂದ ಪೈ.

---

* ಬುದ್ಧನ ಜನನ, ಬೋಧಿಜ್ಞಾನ ಹಾಗೂ ಪರಿನಿರ್ವಾಣಗಳ ಆಯಾ ವೈಶಾಖ ಪುಣ್ಣಿಮೆಗಳಿಗೆ ಸರಿಯಾದ ಈ ತಾರೀಖು ವಾರಗಳನ್ನು ಕುರಿತು ತಿಳಿಯ ಬೇಕೆಂದಿರುವವರು ಮೈಸೂರಿನ 'ಪ್ರಬುದ್ಧ ಕರ್ನಾಟಕ'ದಲ್ಲಿ (ಸಂ. ೨೭, ಪಾರ್ಥಿವ ಸಂ॥ದ ವಿನಾಯಕನ ಸಂಚಿಕೆ, ಪು ೯೩) ಪ್ರಕಟವಾದ 'ಬುದ್ಧನ ಮತ್ತು ಮಹಾ ವೀರನ ಪರಿನಿರ್ವಾಣಗಳ ಕಾಲ' ಎಂಬ ನನ್ನ ಲೇಖನವನ್ನು ನೋಡುವುದು.

**ನಮೋ ತಸ್ಸ ಭಗವತೋ ಅರಹತೋ ಸಮ್ಮಾಸಂಬುದ್ಧಸ್ಸ**

# ವೈಶಾಖಿ

### ಅಥವಾ

## ಬುದ್ಧನ ಕಡೆಯ ದಿನ

---

'ಆನಂದ[1] ಏಳಿನ್ನು ಭಿಕ್ಷುಗಳನೆಚ್ಚರಿಸು,
ಪಾವೆಯಿಂ[2] ಆಮ್ರವನದಿಂ ಕೋಳಿ ಕೂಗುವುದೆ
ಹೊರಟು [3]ಕುಶಿನಾರಕಾಗುವ' ಎಂದನಮಿತಾಭ.[4]
ಆನಂದನವರನೆಬ್ಬಿಸುತೊಡನೆ ಮರಳಿ ಬರೆ,
ಭಗವಂತ[5] ಮೆಲ್ಲನಿಂತೆಂದ--'ಕೇಳಾನಂದ,
ನಿನ್ನೆ ಕಮ್ಮಾರ ಚುಂದನ ಮನೆಯೊಳಟ್ಟ [6]ಸೂ
ಕರ ಮದ್ದವನುಂಡ ಬಳಿಕ ಬಸುಗುತ್ತದಿಂ
ದಣಿಯರಂ ಬಳಲುತಿಹೆ, ಬಸಿರು ನೋನೋಯುತಿದೆ,
ಕರುಳು ನುಲಿನುಲಿಯುತಿದೆ. ಮದ್ದವವದಂ [7]ತಥಾ
ಗತರೆ ಹೊರತಾರುಮರಗಿಸರೆಂದೆ ಉಳಿದುದಂ
ಕುಳಿಯುಗೆದು ಹೂಳೆಂದೆ. ಮತ್ತೆ ಕೇಳಾನಂದ,
ಇಂದು ನಲವತ್ತಯಿದು ವರುಷ ಮುನ್ನಾನೊಮ್ಮೆ
ಸಂಬೋಧಿವಡೆದಣಮ ದಿನದಿ [8]ನೇರಂಜರೆಯ
ತಡಿಯಣುರುವೇಲೆಯಾ ನ್ಯಗ್ರೋಧದಡಿಯಲ್ಲಿ
ವಿಹರಿಸುತ್ತಿರೆ ಪಾಪಿ [9]ಮಾರನಯ್ತಂದಲ್ಲಿ,
ಪರಿನಿರ್ವೃತಿಸು[10] ಸುಗತ,[11] ಬದುಕಿಂದ ಭಗವಂತ
ತೊಲಗೆಂದ. ಪರಿನಿರ್ವೃತಿಸೆ ಮಾರ, ಬದುಕಿಂದ
ತೊಲಗೆನೀ ಬ್ರಹ್ಮಚರ್ಯದ ಧರ್ಮ ಋದ್ಧಿಸದ
ಮುನ್ನ, ಜಗದೊಳಗೆ ವಿಸ್ತಾರಿಸದ ಮುನ್ನ, ಪೃಥು
ಭೂತವಾಗದ ಮುನ್ನ, ಸ್ಫೀತವಾಗದ ಮುನ್ನ,
ಮನುಜರಲಿ ಸುಪ್ರಕಾಶಿಸದ ಮುನ್ನಾಂ ಕಣಾ
ತೊಲಗೆನೆಂದವಗೆಂದೆ. ಇಂದಿಗಿದೊ ಆನಂದ
ಮೂರೆ ತಿಂಗಳ ಹಿಂದೆ [12]ವೈಶಾಲಿಯಲ್ಲಿಯಾ

ಚಾಪಾಲ ಚೈತ್ಯದಲ್ಲಿದ್ದಂದು ಮರಳಿಯಾ
ಪಾಪಿ ಮಾರಂ ಬಂದು, ಪರಿನಿರ್ವೃತಿಸು ಸುಗತ, ೨೫
ಭಗವಂತ ಬದುಕಿಂದ ತೊಲಗೆಂದ. ನಾನವಗೆ
ಸುಖಿಸೆಲವೊ ಮಾರ, ಇನ್ನಾಂ ತಳುವೆನಿಂದಿನಿಂ
ಮೂರೆ ಮಾಸದಿ ತಥಾಗತನ ಪರಿನಿರ್ವಾಣ
ವಾಗಲಿಹುದೆಂದೆ. ಮೇಣಂದಿನಿರುಳೆ ಹಿರಣ್ಯ
ವತಿಯಾಚೆಕರೆಯ ಕುಶಿನಾರದುಪವರ್ತನದ* ೩೦
ಮಲ್ಲರಾ ಸಾಲವನದಲ್ಲಿ ಪಶ್ಚಿಮ ಯಾಮ
ದೊಳಗೆ ಕಾಸಿದ ಕಾಂಚನಂ ಕೀಳನುಳಿವಂತೆ,
ಆನೆ ನುಂಗಿದ ಬೇಲದಂತೆ, ನಾಗಂ ತನ್ನ
ಹೆರೆಯುಚ್ಚುವಂತೆ, ಆನಂದ ಸುಗತಂ ಕೇಳ
ದೇಹವಂ ದೊರೆದಪಂ ಮತ್ತೆ ಕೇಳಾನಂದ, ೩೫
ಕಾದ ಕಬ್ಬಿಣಕಿತ್ತ ನೀರಂತೆ, ನಿದ್ದೆಯಂ
ತಿಳಿದವನ ಕನಸಾರುವಂತೆ, ಕಪ್ಪುರ ಸುಟ್ಟು
ಬೂದಿಲ್ಲದಂತೆ, ತನಿವಾಲ ನೊರೆಯಂತೆ ಪರಿ
ನಿರ್ವೃತಿಸುವಂ ಸುಗತನಿದೊ ಹಳೆಯ ಪಂಜರದ
ಸಡಲಿದ ಸಲಾಕೆಯಂತೆ ನಿಮಿತ್ತ ಮಾತ್ರವೀ ೪೦
ರುಜೆಯದಕೆ. ಆನಂದ ವಯಸೆನ್ನ ಪರಿಪಕ್ವ
ವಾಯ್ತು, ನೋಡಿಂದೆ ತುಂಬಿತು ವರುಷಪೆಂಬತ್ತು,
ಸಂದುದಾಯುಷ್ಯ. ಹೆಚ್ಚಿನ ಜೋಕೆಯಿಂ ತಥಾ
ಗತನ ದೇಹಂ ಹರಕು ಬಂಡಿಯೆನೆ ಕುಲುಕುತಿದೆ.
ಎಂದಿಗೆ ಗಡಾ ಂನಿರೋಧ ಸಮಾಧಿಯಲಿ ವಿಹರಿ ೪೫
ಪನೊ ಸುಗತನವನ ದೇಹಕ್ಕೆ ನೆಮ್ಮದಿಯಂದೆ.
ಆನಂದ ಆತ್ಮದೀಪರೆ ಆತ್ಮಶರಣರೆಮು,
ಧರ್ಮದೀಪರೆ ಧರ್ಮಶರಣರೆಮು ನೀವಾಗಿ,
ಭಿಕ್ಷುಗಳಿಂ ಶೀಲಂ, ಸಮಾಧಿ, ಪ್ರಜ್ಞೆ, ವಿಮುಕ್ತಿ
ಈ ಚತುರ್ಧರ್ಮದನುಬೋಧಿಯಾಗುವುದೆ ಭವ ೫೦
ಭವಕೆ ನೀಸುತಲಿರುವ ಭವತೃಷ್ಣೆಯುಚ್ಚಿನ್ನ
ವಾಗಿ ಬಳಿಯಿಂ ಪುನರ್ಭವವಿಲ್ಲ. ಕೇಳಿರೈ

---

* ಉಪವರ್ತನ = ನೆರೆಹಳ್ಳಿ

ವ್ಯಯಧರ್ಮವೆಲ್ಲ [೧೨]ಸಂಸ್ಕಾರವದರಿಂ ಸಾವ
ಧಾನಿಸಿರಿ. ಇಂದೆ ನಿಮ್ಮಿಂದಗಲಿ ಪೋಪೆ. ನೀ
ವಪ್ರಮತ್ತರೆ, ಜಾತ್ರತರೆ. ಸುಶೀಲರೆ, ಸಮಾ
ಹಿತರೆ ಆಗಿರಿ, ಚಿತ್ತವಂ ದಮಿಸಿಕೊಳಿರಿ, ಯಾ
ವಾತನೀ ಉಪದೇಶವಂ ತಪ್ಪದಿಂತು ಕೆ
ಯ್ಕೊಳುವನಾತಂ ಸಂಸ್ಕೃತಿಯ ತೇರಿ ದುಃಖವಂ
ಗೊನೆಗೊಳಿಸುವಂ. ಕೇಳಿರಿದೋ ಕೋಳಿ ಕೂಗುತಿದೆ.
ಆನಂದ ಇನ್ನು ತಡೆಯದೆ ನಡೆವ ಕುಶಿನರಕೆ.'[೧೩]
ಇಂತೆಂದು ಧೀರನಾ [೧೪]ಗೌತಮಂ ಪ್ರಬಲಿಸುವ
ಮರಣಾಂತ ವೇದನೆಯು ಸೊಲ್ಲನೆತ್ತದೆ ಸೋಸಿ,
ಪಾವೆಯಂ ಕೊನೆಗೊಮ್ಮೆ [೧೫]ನಾಗಾವಲೋಕಿಸುತ,
ದೂಳಿಲ್ಲ ಕೆಸರಿಲ್ಲದಂತಿರುಳ ಮಳೆ ತೊಳೆದ
ದಾರಿಯಂ ಮೆಲ್ನಡೆದು ಭಿಕ್ಷುಸಂಘಂ ಬೆರಸು,
ಉಡುಗಣವನೊಡಗೂಡಿ ನಡೆಯುವುಡುವೊಡೆಯನೆನೆ,
ಸಾರ್ಥಮಂಡಲದಗ್ರಸರ ಸಾರ್ಥವಾಹನೆನೆ,
ಪಾವೆಯಿಂದೆದ್ದು ಕುಶಿನರದ ಬಳಿವಿಡಿದಂ.

ಇದೊ ನೋಡ ಶುಭ್ರ ಗಗನದ ಪಡು ದಿಗಂತದೇ
ಕಾಂತದಲಿ ಮಿಳ್ಮಿಳನೆ ಮಿಟುಕೆ ಸುತ್ತಣ ತಾರೆ
ಗಳ ಬಳಗವಸ್ತಮಿಪ ಪೂರ್ಣಚಂದ್ರಂ ತಥಾ
ಗತನ ಪರಿನಿರ್ವಾಣ ನಾಟಕವನೊಂದಿನಕೆ
ಮುನ್ನೆ ನಟಿಸುವನೇನೊ ! ಮೆಲ್ಲನಿಗೊ ತೀಡುತಿದೆ
ತಂಗಾಳಿ, ಹೂಗಾಳಿ. ಉಲಿಯುತಿದೆ ಒಂದೊಂದೆ
ಹಕ್ಕಿ. ಠೀಠೀಕರಿಸುತಿದೆ ಝಿಲ್ಲಿ. ತೊಗಲಿಕ್ಕಿ
ಹಾರುತಿದೆ ಮರದೆಡೆಗೆ. ಹಾಳುಬೀಳಿನ ಬಳಿಗೆ
ಸೇರುತಿದೆ ಗೂಗೆ, ಹಳೆಯಟ್ಟಗಳ ಕಂಡಿಯಂ
ತೂರುತಿದೆ ಮಟಬೆಕ್ಕು. ತುಡುಗುಂಡು ನರಿವಿಂಡು
ನುಗ್ಗುತಿದೆ ಹೊದರೊಳಗೆ. ನೀರ್ಗಳಲಿ ಗೊಡರುತಿದೆ
ಕಪ್ಪೆ. ನಾಯಿಗಳೆದ್ದು ಮೆಯ್ಮುರಿದು ಕಿವಿಗೊಡಹಿ
ಬೊಗಳುತಿವೆ. ಮೆಲ್ಲಮೆಲ್ಲನೆ ರೆಂಬೆ ಜೀಕುತಿವೆ.

ಒಂದೆರಡು ಮೂರು ಮೇಣಂತಂತೆ ಮಿಗುಮಿಗುತ
ಮನೆಬೆಳಕು ಮಿಣುಕುತಿವೆ. ಅಲ್ಲಲ್ಲಿ ಮನೆಯಲ್ಲಿ
ಕುಮಿಯುತಿದೆ ಮೊಲೆಗೂಸು. ಮರಳಿ ಕೂಗಿತು ಕೋಳಿ.
ಅರುಣಿಸಿತು ಮೂಡ ದೆಸೆ. ಬಗೆಬಗೆಯ ವಿಹಗಗಳ
ಮೇಳವಂ ಪಾಡುತಿದೆ. ಕಾಕಾರವಂ ಸುತ್ತ
ಲಲ್ಲಲ್ಲಿ ಕರೆಯುತಿದೆ, ತೊರೆಯ ತಡಿಗಾದಪುದು
ನೀರ್ವಕ್ಕಿಗಳ ಕೇಳಿಗಳ ಮನೆಗಳಲ್ಲಲ್ಲಿಂದ
ಹೊಗೆ ತೆಳ್ಳನೇಳುತಿದೆ. ಒಕ್ಕಲಿಗನೆತ್ತುಗಳ
ನಟ್ಟಿ ಹೊಲದಾಗೆ, ಮಡಿವಳನರುವೆ ಮೂಟೆಯಂ
ಕಟ್ಟಿ, ಬಲೆಯಂ ಹೊತ್ತು ಧೀವರಂ ಹೊಳೆಯಾಗೆ
ನಡೆದಪಂ. ಕಿರ್ರೆಂದು ತಿರುಗಲಾಯಿತು ಗಾಣ.
ಕಮ್ಮಾರಸಾಲೆಯಲಿ ಭುಗಭುಗಿಸುತಿದೆ ಬೆಂಕಿ.
ಅದನೆಲ್ಲ ಕಂಡು ಕಾಣದೆ ಭಿಕ್ಷುಸಂಘಮೊಡ
ಗೂಡುತ ತಥಾಗತಂ ಮೆಲ್ಲಮೆಲ್ಲನೆ ಕಾಲ
ನಿಡುತ ಹಾದಿಯಿನತ್ತಣೊಂದು ಮರದಡಿಗಯ್ದಿ
ಇಂತೆಂದ-'ಆನಂದ ದಣಿದಿರುವೆ. ನಾಲ್ವಡಿಸಿ
ಹಾಸು ಕಂಥೆಯ; ಕುಳಿತು ದಣುವನಾರಿಸುವೆ.

ಆನಂದನಂತೆ ಕಂಥೆಯ ಹಾಸೆ ಕುಳಿತಲ್ಲಿ
ಮರಳಿ ಇಂತೆಂದ–'ಆನಂದ ಬಾಯಾರುತಿದೆ,
ಕೊಂಚ ನೀರಂ ತಾರ, ಕುಡಿವೆ ನಾನಾನಂದ.'
ಆನಂದನಾಗ, 'ಭಗವಂತ ಈ ದಾರಿಯಿಂ
ದೀಗ ಹೋದಯ್ನೂರು ಬಂಡಿಗಳ ಗಾಲಿಯಿಂ
ಕದಡಿ ಕೆಸರಾದ ತೊರೆಯೀ ನೀರಪಾನೀಯ.
ಇಲ್ಲೆ ಬಳಿಯಣ ಕಕ್ಕುತ್ಥಾನದಿಯ ನೀರೆನಿತೊ
ಶೀತಲಂ ನಿರ್ಮಲಂ ಮಧುರಮಾ ನದಿಗಯ್ದಿ
ನೀರ್ಕುಡಿದು ಮೆಯ್ತೊಳೆದು ಕೊಳವೆ' ಎನೆ, ಮತ್ತೊಮ್ಮೆ
ಸುಗತನಿಂತೆಂದ–'ಆನಂದ ಬಾಯಾರುತಿದೆ,
ಕೊಂಚ ನೀರಂ ತಾರ, ಕುಡಿವೆ ನಾನಾನಂದ.'
ಆನಂದನಂತೆ ಉತ್ತರವಿತ್ತ. ಬಳಿಕೊಮ್ಮೆ

ಬುದ್ಧನಿಂತೆಂದ–'ಬಾಯಾರುತಿದೆ ಆನಂದ,
ಕೊಂಚ ನೀರಂ ತಾರ ಕುಡಿವೆ ನಾನಾನಂದ.'
ಮೂರನೆಯ ಬಾರಿ ಅಂತೇಬುದೆ ತಥಾಗತಂ
ತಟ್ಟನೆ ತಥಾಸ್ತು ಎಂದಾನಂದ ಪಾತ್ರವ
ನೆತ್ತಿ ತೊರೆಗಯ್ದಿದಂ. ಬಂಡಿಗಳ ಗಾಲಿಯಿಂ
ದೀಗ ತಾಂ ಕದಡಿ ಕೆಸರಾದ ನೀರನಿತರೊಳ್,
ಕಿಲುಬಿಡಿದ ಕನ್ನಡಿಗೆ ಹುಳಿಹಿಡಿಸೆ ಪೊಳೆವಂತೆ,೧೬
ವಿಸ್ಮರಿಸೆ ದುಸ್ವಪ್ನವೆಚ್ಚರಂ ತಿಳಿವಂತೆ,
ಗಾಳಿ ಮೋಡವ ಸೋಪೆ ಬೆಳರ್ವ ಚಂದ್ರಿಕೆಯಂತೆ
ಎನಿತಚ್ಛವೆನಿತನಾವಿಲವಾಗೆ ಕಂಡು ನಿ
ಬ್ಬೆರಗಾಗಿ, ಆತನಮಮೇನಚ್ಚರಿಯೊ ತಥಾ
ಗತನಾ ಮಹದ್ಧಿರ್ಕತೆ! ಏನದ್ಭುತವೊ ಅಮಮ
ಸುಗತನ ಮಹಾನುಭಾವತೆ! ಎಂದು ಕೊಂಡಾಡಿ,
ನೀರು ತುಂಬಿಸಿ ತಂದ ಪಾತ್ರವ ತಥಾಗತಂ
ಗಿತ್ತು, 'ಭಗವಂತ ಅಮಮೇನಚ್ಚರಿಯೊ ತಥಾ
ಗತನಾ ಮಹದ್ಧಿರ್ಕತೆ! ಏನದ್ಭುತವೊ ಅಮಮ
ಸುಗತನ ಮಹಾನುಭಾವತೆ! ಬಂಡಿಗಳ ಗಾಲಿ
ಯಿಂದೀಗ ಕದಡಿ ಕೆಸರಾದ ನೀರನಿತರೊಳೆ
ಎನಿತಚ್ಛವೆನಿತಾನಾವಿಲ; ಕುಡಿಯ ಭಗವಂತ'
ಎನಲು ಬುದ್ಧಂ ಪಾತ್ರವಿಸಕೊಂಡು ನೀರ್ಕುಡಿದು
ಸಂಬಾಳಿಸುತ್ತ ಕಣ್ಮುಗಿದು ಪದ್ಮಾಸನದಿ,
ಡಿಂಡೀರ ಪಿಂಡದಿ ಮರಾಲ ಮಂಡಿಸಿದಂತೆ,
ತೆರೆದ ರೆಪ್ಪೆಯಲಿ ಕಣ್ಣಿನ ಗೊಂಬೆ ನೆಲತಂತೆ,
ಕುಳಿತಿರಲು ಮೂಡಣದಿ ತಣ್ಮುಗಿಲ ಮರೆಗೆ ವೈ
ಶಾಖ ಪೂರ್ಣಿಮೆಯ ಮಾರ್ತಂಡನುದಯಿಸಿದಂ.

ಬಾರೆನ್ನ ಮನಸೆ ನೋಡಲ್ಲಿ ಮರದಡಿಯಲ್ಲಿ
ಕುಳಿತಿಹ ತಥಾಗತನ! ನಸುಕಿನಲಿ ನಸುಮುನ್ನ
ಮುಸುಕಿದಾ ಸುಗತನನ್ನೀಗ ನೆಟ್ಟನೆ ನೋಡ!
ವರುಷವೆಂಬತ್ತಂತೆ, ಇಂದೆ ತುಂಬಿತ್ತಂತೆ—

ತೊಗಲನಿತು ಸಡಲಿಲ್ಲ, ನವಿರನಿತು ನರೆತಿಲ್ಲ,
ದನಿಯಣಂ ಕುಗ್ಗಿಲ್ಲ, ಹುರಿಯಣಂ ಬಗ್ಗಿಲ್ಲ,
ಕಣ್ಣಾಲಿ ಬೆಳತಿಲ್ಲ, ಹಲ್ಲೊಂದು ಜಗುಳಿಲ್ಲ.
ನೋಡ ನಂದ್ಯಾವರ್ತ ತರುವಂತೆ ಮಧ್ಯಮೋ
ನ್ನತನ ಜಂಬೂಫಲದ ಧವಲ ದೇಹಚ್ಛವಿಯ !
ಶೈವಲಾಚ್ಛನ್ನ ಕಾಸಾರದಂತಾನನಂ
ನೋಡೆನಿತು ಗಂಭೀರ ! ನೋಡ ಮೋಡದ ಮರೆಯ
ಮಿಂಚಂತೆ ದೃಗ್ವಿಷಯದಾಚೆ ನಿಟ್ಟಿಪ ಮುಕುಲ
ನೇತ್ರವಂ ! ಕರ್ಣಗಳೊ ಎನಿತೊ ಪ್ರಶ್ನೆಗಳೊಗುವ
ಆನೆಬಾಗಿಲೊ ನೋಡ ! ನಾಸಿಕವೊ ಮಾರನಂ
ಸೋವ ಕಹಳೆಯೊ ನೋಡ ! ಬಾಯೊ ವಾಗ್ಜಾಹ್ನವಿಯ
ನಂತೆ ಕಾಲದೆ ಹುಯ್ವ ಸಾಗರದ್ವಾರವದೊ
ನೋಡ ! ನೋಡ ವಿಶಾಲ ವೃಕ್ಷವೊ ವಿಭಾತದಾ
ಪಾಟಲಾಭ್ರವೊ ! ನೋಡ ನ್ಯಗ್ರೋಧ ಶಿಫೆಯೊ ಆ
ಜಾನುಬಾಹುವೊ ! ನೋಡ ವಿಪುಲಾಂಕವೊ ಕಕುತ್ಥ
ಯಂತರೀಪವೊ ! ನಿಶೀಥದ ಶಶಾಂಕಾತಪವೊ
ಬ್ರಹ್ಮಚರ್ಯದ ಶೀತಲೋಜಸ್ವಿತೆಯೊ ನೋಡ !
ಕಣ್ತಣಿಯೆ ನೋಡ, ಕಣ್ಣುಡಿದು ನೋಡಿಂದೆ ಈ
ಜ್ಞಾನದೀ ಧ್ಯಾನದೀ ಶಾಂತಿಯಿಾ ಕಾಂತಿಯಿಾ
ಅರ್ಹಂತವೀ ಧರ್ಮ ವಿನಯ ವಿದ್ಯಾಚರಣ
ಸಂಪನ್ನವೀ ಅನುತ್ತರವೀ ಪುರುಷದಮ್ಯ
ಸಾರಥಿಕವೀ ಸುಗತವೀ ದೇವಮಾನುಷ್ಯ
ಶಾಸ್ತೃವೀ ಸಂಬುದ್ಧವೀ ಲೋಕವೇತ್ತೃವೀ
ಭಗವಂತವೀ೧೭ ದಯೈಕಾಲೋಕವೀ ಅಪರ
ಭಾನುವಾಳ್ದಪನು ನಿಬ್ಬಯಲೊಳಗೆ ನೋಡ !

ಆಗಳದೊ ಕುಶಿನಾರದಿಂದ ಪಾವೆಗೆ ಪೋಪ
ಪುಕ್ಕುಸಂ ಮಲ್ಲನೊರ್ವಂ ಮರದ ಕೆಳಗಲ್ಲಿ
ಕುಳಿತ ಭಗವಂತನಂ ಕಂಡು ವಂದಿಸಿ ಕೆಲದೆ
ಮಂಡಿಸುತ, 'ಭಗವಂತನಿಲ್ಲಿರುವನೆಂದರಿತು

ಬಂಡಿಗಳ ಮುಂದಟ್ಟಿ ಕಾಂಬೆನೆಂದಿಲ್ಲಿಗಾ
ನಯ್ತಂದೆ. ಸಕಲ ದೇವತೆಗಳುಂ ಮನುಜರುಂ
ಸುಖವನಿಚ್ಛಿಸಿ ಮಂಗಲದ ಕಲ್ಪನೆಯ ಮಾಡು
ತಿಹರೈಸೆ ? ಅದರೊಳುತ್ತಮವಾವ ಮಂಗಲಂ ?
ಪೇಳ ಭಗವಂತ' ಎನೆ, ಭಗವಂತನಿಂತೆಂದನ್—
'ಕೇಳ ಪುಕ್ಕುಸ, ಮೂರ್ಖರೊಡನಾಟವಂ ತ್ಯಜಿಸೆ
ಪಂಡಿತರ ಸೇರೆ, ಪೂಜಿಸೆ ಪೂಜ್ಯರನ್ನದುವೆ
ಉತ್ತಮಂ ಮಂಗಲಂ. ಯೋಗ್ಯದೇಶದಿ ನೆಲಸೆ,
ಗಳಿಸಿದಾ ಪುಣ್ಯಮೊಡನಿರೆ, ಮನವ ಸನ್ಮಾರ್ಗ
ದಲಿ ನಿಲಿಸಲದೆ ಕಣಾ ಉತ್ತಮಂ ಮಂಗಲಂ.
ವಿದ್ಯೆಯಂ ಶಿಲ್ಪವಂ ವಿನಯವಂ ಕಲಿಯೆ, ಸ
ದ್ವರ್ತನದಿ ನಡೆಯೆ, ಸಮಯೋಚಿತಂ ಭಾಷಣಂ
ಮಾಡಲದೆ ಉತ್ತಮಂ ಮಂಗಲಂ. ತಾಯ್ತಂದೆ
ಯರ ಸೇವಿಸುತ್ತಲಿರೆ, ಮಡದಿಯಂ ಮಕ್ಕಳಂ
ಬಳಗವಂ ದಾನದಿಂ ಪ್ರಿಯವಚನದಿಂದರ್ಥ
ಚರ್ಯೆಯಿಂ ಸಮಭಾವದಿಂ ಸಂಗ್ರಹಿಸೆ, ವ್ಯವ
ಸ್ಥಿತಮಾಗಿ ಕಾರ್ಯವಂ ಗೆಯ್ಯಲ್ಲದೆ ಉತ್ತಮಂ
ಮಂಗಲಂ, ಬೇಡುವವರಿಗೆ ನೀಡೆ, ಧರ್ಮವ
ನ್ನಾಚರಿಸೆ, ಪಾಪದಿಂ ತೀರ ವಿರಮಿಸೆ, ಮದ್ಯ
ಪಾನದಿಂ ಸಂಯಮಿಸೆ, ಧರ್ಮಕಾರ್ಯದೊಳೆಡಹ
ದನವದ್ಯ ಕರ್ಮವನ್ನೆಸಗಲದೆ ಉತ್ತಮಂ
ಮಂಗಲಂ. ಗೌರವವೆ, ಸಂತುಷ್ಟಿಯೆ, ವಿನಮ್ರ
ಭಾವವೆ, ಕೃತಜ್ಞತೆಯೆ, ಅಂದಂದು ಧರ್ಮದಾ
ಕರ್ಣನವೆ, ಕೇಳಿದುವೆ ಉತ್ತಮಂ ಮಂಗಲಂ.
ಕ್ಷಮೆಯೆ, ಮೃದುಭಾಷಿತವೆ, ಶ್ರಮಣರ ಸಮಾಗಮವೆ,
ಅಂದಂದು ಧರ್ಮಸಂಕಥೆಯೆ, ಅದೆ ಉತ್ತಮಂ
ಮಂಗಲಂ, ಬ್ರಹ್ಮಚರ್ಯವೆ, ತಪಸ್ವಿತೆಯೆ, ಚತು
ರಾರ್ಯ ಸತ್ಯಗಳ್ಗೆ ದರ್ಶನವೆ, ನಿರ್ವಾಣದಪ
ರೋಕ್ಷಾನುಭವವೆ, ಇಂತಿದೇ ಉತ್ತಮಂ ಮಂಗಲಂ.
ನಿಂದಾಸ್ತುತಿ, ಯಶೋಪಯಶ, ಸುಖದುಃಖ, ಲಾ

ಭಾಲಾಭವೀ ಎಂಟು ಲೋಕಧರ್ಮದಿ ಸಿಲುಕಿ
ದೊಡವಮಣಂ ಕಂಪಿಸದೆ ಶೋಕರಹಿತಂ ಸುಖಿಂ
ವಿರಜಮಿರೆ ಚಿತ್ತವದೆ ಉತ್ತಮಂ ಮಂಗಲಂ.
ಮಂಗಲವಿನ್ನಾಚರಿಸುತ ಸರ್ವತ್ರಾಪ
ರಾಜಿತಂ ಯಾವವಂ ಸ್ವಸ್ತಿಸುಖವಡೆದಪನೊ
ಅದೆ ಆತನುತ್ತಮಂ ಮಂಗಲಂ ತಿಳಿಯಾ !'

ಮಲ್ಲನಾ ದಿವ್ಯವಾಣಿಯನಾಲಿಸಿಂತೆಂದ--
'ಭಗವಂತ, ಬರಿಯ ಕಣಜದಿ ಗೋಣಿ ದವಸವಂ
ಸುರಿವಂತೆ, ಬಿಟ್ಟ ಬಂಡಿಗೆ ಎತ್ತುಗಳ ಹೂಡ
ಲೆಳೆವಂತೆ, ಬರಿಗೈಯ ಬಣಜಿಗಗೆ ಬಂಡವಳ
ವೆರದಂತೆ, ಪಾಂಥಗಿರುಳಲಿ ಸತ್ರ ತೋರ್ದಂತೆ,
ಕೃತಕೃತ್ಯನಾದೆನುತ್ತಮ ಮಂಗಲಂಗಳೀ
ಬೋಧೆಯಿಂದಿನ್ನು ಭಗವಂತನಿಗೆ ಶರಣೆಂಬೆ,
ಧರ್ಮಕಾಂ ಶರಣೆಂಬೆ, ಸಂಘಕಾಂ ಶರಣೆಂಬೆ.
ಭಗವಂತನಿನ್ನೊಪ್ಪಿ ಕೊಳುಗೆನ್ನ ತನ್ನುಪಾ
ಸಕನಾಗಿ. ಭಗವಂತ, ಇದೊ ಸ್ವರ್ಣವರ್ಣದೀ
ಪರಿಧಾನ ಯುಗಳ, ಹೊದಕೊಂಡಿದನೆನ್ನಲ್ಲಿ
ದಯದೋರು.' ಭಗವಂತನಂತಾಗೆ ಒಂದೆನಗೆ
ಒಂದನಾನಂದನಿಗೆ ಹೊದಿಸೆಂದನಂತಾಗ
ಲೆಂದು ಪುಕ್ಕಸನಾಗ ಭಗವಂತಗೊಂದು ಮೇ
ಣಾನಂದಗಿನ್ನೊಂದು ಹೊದಿಸಿ, ಸಂಜೆಯ ಹೊನ್ನ
ಹೊದೆದ ಭಾಸ್ಕರನಂತೆ, ಹೆಣ್ಣೆಲೆಯೊಳಶ್ವತ್ಥ
ದಂತೆ, ಮುಂಗಾರಿನುಬ್ಬರದಿಂದ ಹೊಂಗಲೆತ
ದೇವನಿರ್ಝರಣೆಯಂತೆಸವ ಬುದ್ಧಂಗೆರಗಿ
ಬಲವಂದು ತೆರಳೆ, ಭಗವಂತನಿಗೆ ಹೊದಿಸಿದಾ
ಹೊಂಬಟ್ಟೆ, ಸಂಧ್ಯಾರುಣಂ ಕೌಮುದಿಸುವಂತೆ,
ಪಾರದಂ ತಗುಳ್ದ ಹೊನ್ನಂತೆ, ಹೊಟ್ಟುಡುಗಿದಾ
ನೆಲ್ಲಂತೆ ಕಳೆಗುಂದೆ, ಆನಂದ ಕಂಡಿದೇ
ನಚ್ಚರಿಯ ! ಏನದ್ಭುತಂ ! ತಥಾಗತನ ಮೆ
ಯ್ವಣ್ಣವೆನಿತವದಾತ ! ಎನಿತು ಪರಿಶುದ್ಧವೀ

ಹೊಂಬಟ್ಟೆ ತೊಡಿಸುವೊಡನೆಂತು ಕಳೆಗುಂದಿತೆನೆ,
ಭಗವಂತನಿಂತೆಂದ—'ಅಂತೆಯೆ ಕಣಾನಂದ,
ಆವತ್ತಿಗೊಮ್ಮೆ [೫]ಸಂಬೋಧಿವಡೆದಂದು ಮೇ
ಣೇವತ್ತಿಗೊಮ್ಮೆ [೨೧]ನಿರುಪಧಿಶೇಷ ನಿರ್ವಾಣ
ವಡೆವಂದು ಕೇಳ್ತಥಾಗತನ ಮೆಯ್ವಣ್ಣವೆಂ
ತೆರಡು ಸೊಳಾನಂದ ಅವದಾತವಾಗುತಿದೆ,
ಪರಿಶುದ್ಧವಾಗುತಿದೆ.'

ಅಂತೆಂದು ಭಿಕ್ಷುಗಳ
ನೊಡಗೂಡಿ ಬುದ್ಧಂ ಕಕುತ್ಥಾನದಿಯನಯ್ದಿ
ನೀರಿಳಿದು ನಿಂದು ನೀರ್ಕುಡಿದು ಮೇಲಕೆ ಬಂದು
ಕೆಲಕಾಗಿ ಆಮ್ರವನವೊಕ್ಕು ಚುಂದನಿಗೆಂದ—
'ಚುಂದ ನಾಲ್ವಡಿಸಿ ಕಂಥೆಯು ಹಾಸು, ದಣಿದಿರುವೆ
ನೊರಗಿದಪೆ.' ಚುಂದನಂತೆಯೆ ಕಂಥೆ ಹಾಸೆ, ಗೌ
ತಮನಾಗ [೨೨]ಸಿಂಹಶಯ್ಯೆಯಲಿ ಕಾಲಿನ ಮೇಲೆ
ಕಾಲಿಕ್ಕಿ ಬಲವಂಕದಲ್ಲಿ ಮಲಗಿ, ತನ್ನ ಮುಂ
ದಿಹ ಚುಂದನನ್ನೋಡಿ ಭಿಕ್ಷುಗಳಿಗಿಂತೆಂದ—
'ದೂರದಿರಿ ಮೇಣ್ಮರುಗಲೀಯದಿರಿ ಚುಂದನ
ನ್ನವನ ಸೂಕರಮದ್ದವಂ ತಥಾಗತಗಿಂತು
ಕೊನೆಯ ಕೂಳಾಯ್ತೆಂದು, ಮೃಗನಿಕ್ಕುವ ಶಬರ
ನಂಬುವಂ ಜರೆಯದಿರಿ, ಬೇಸಗೆಗೆ ಕೊಳ ಬತ್ತೆ
ಶಫರಿಯಂ ಶಪಿಸದಿರಿ, ಜರಠ ಶಕಟಂ ಕುಸಿಯೆ
ಹೋರಿಯಂ ಹಳಿಯದಿರಿ. ಕೇಳಿರೈ ಭಿಕ್ಷುಗಳೆ,
ಯಾವ ಪಿಂಡವನುಂಡುವನೆ ತಥಾಗತನನು
ತ್ತರದ ಸಂಬೋಧಿಯಂ ಪಡೆದಪನೊ, ಮೇಣಾವ
ಪಿಂಡವನ್ನುಂಡವನೆ ಸುಗತ ನಿರುಪಧಿಶೇಷ
ನಿರ್ವಾಣವಡೆದಪನೊ, ಅರಿಯಿರ್ರೈ ಆ [೨೩] ಪಿಂಡ
ಪಾತದ್ವಯಂ ಪಿಂಡಪಾತಾಂತರದಿನೆನಿತೊ
ಆಯುಷ್ಕರಂ, ಯಶಸ್ಕರತರಂ, ಸುಖಕರಂ,
ಸ್ವರ್ಗಂಕರಂ, ಮಹಾಫಲತರಂ !' ಮತ್ತೆ, ಗೌ
ತನುನಿಂತುದಾನಿಸಿದನೆಳ.—'ಹೆಚ್ಚುತಿದೆ ಕೊಡುವವನ

ಪುಣ್ಯ ಮೇಣ್ಸಂಯಮಿಯು ವೈರವಿನಿಸುಂ ಬಾಳ
ದೊಳ್ಳಿದಂ ಪಾಪವೆಲ್ಲವನುಳಿದಪಂ, ದ್ವೇಷ
ರಾಗ ಮೋಹಂ ಕ್ಷಯಿಸೆ ನಿರ್ವಾಣವಡೆವಂ.'

ಆನಿತರೊಳು ಭಾಸ್ಕರಂ ನಡುಪಡುವಣಾಕಾಶ
ಕಿಳಿಯೆ, ಬಿಸಿಲಿನ ಬೇಗೆ ತವೆಯೆ, ಜುಂಯ್ಯನೆ ಗಾಳಿ
ಬೀಸೆ, ಮಧ್ಯಾಹ್ನ ಮಲ್ಲಿಗೆಯರಳೆ, ತುರುಮಂದೆ
ಮೇಹುಗಾಡಿಂದ ಝಣಝಣಿಸಿ ಮನೆ ಮರಳುತಿರೆ,
ಬಿಸಿಲ ಝಳಕೆಲೆಯು ಮರೆಗಾದ ಕಿರುವಕ್ಕಿಹೊರ
ಹೊಮ್ಮಿ ಚಿಲಿಮಿಲಿಸುತಿರೆ, ಹದ್ದು ಮಂಡಲಿಸುತಿರೆ,
ಮರಗಳಲಿ ಕೋಗಿಲೆ ಕುಹೂಕುಹೂಕರಿಸುತಿರೆ,
ಕಃ ಕಃ ಎನುತ್ತ ಕೆಂಬೋತ ಸಂಸ್ಕೃತಿಸುತಿರೆ,*
ಕಾಡಕ್ಕಿ ಕುಟುಕಿ ಗಿಳಿವಿಂಡು ಹಿಂ[illegible]ರಳುತಿರೆ,
ಮಿಂಚುಳ್ಳಿ ನೀರಿಳಿಯೆ, ಸೂರ್ಗಳಲಿ ಸಸಿನಿದ್ದ
ಪಾರಿವಂ ಗುಬ್ಬಳಿಸೆ, ಕೊರಳನೊಲಿಸುತ ನವಿಲು
ಹೊಲದ ಬಳಿ ಕೆದಕಾಡೆ, ಮರದೊಳಳಿಲೋಲಾಡೆ,
ಕುರಿಯಾಡು ಮರದಡಿಯೊಳುದುರೆಲೆಯ ಜಗಿದಾಡೆ,
ಕೋತಿ ಕಿಚಿಕಿಚಿಸಿ ಜಗ್ಗಿಸಿ ಮರವ ಜಿಗಿದಾಡೆ,
ನೀರೆಡೆಯ ಗರುಕೆಯಲಿ ಗುಂಪೆರಳೆ ಸುಳಿದಾಡೆ,
ಅಗಸನೊಣಬಟ್ಟೆಗಳ ಕಟ್ಟಿ ಮನೆಯಾಗೆ, ಬೆಸ
ದಂ ಗಾಳಗೊಂಡು ಮಡುವಾಗೆ ಎಣ್ಣೆಯ ಕೊಡವ
ನೆತ್ತಿ ಗಾಣಿಗತಿ ಅಂಗಡಿಯಾಗೆ, ನಡೆಯೆ, ಅಂ
ಗಡಿಬೀದಿಯಲಿ ಕೊಡುವ ಕೊಳವ ಗೊಂದಲವಾಗೆ,
ದಾರಿಯಲಿ ಬರುವ ಹೋಗುವ ದಾರಿಗರಹೆಜ್ಜೆ
ಯಾಗಲಿದೊ ಬುದ್ಧನಲ್ಲಿಂದಲೆದ್ದು ಹಿರಣ್ಯ
ವತಿಯಾಚೆಕೆರೆಯ ಕುಶಿನಾರದುಪವರ್ತನದ
ಮಲ್ಲರಾ ಸಾಲವನವಂ ಭಿಕ್ಷುಸಂಘದೊಡ
ನಯ್ದಿ, ಆನಂದ ಉತ್ತರಶೀರ್ಷವಾಗಿ ಈ

* ಸಂಸ್ಕೃತಿಸುತಿರೆ=ಸಂಸ್ಕೃತದಲ್ಲಿ ಮಾತನಾಡುತ್ತಿರೆ

ಯಮಳ ಸಾಲದ ನಡುವೆ ಮಂಚವಂ ಹಾಸು, ನಾ
ದಣಿದಿರುವೆನಾನಂದ, ಮಲಗಿದಪೆ ನಾನೆಂದ.
ಆನಂದನಂತೆ ಹಾಸುವುದೆ ಕಾಲಿನ ಮೇಲೆ
ಕಾಲಿಕ್ಕಿ ಗೌತಮಂ ಸಿಂಹಶಯ್ಯೆಯಲಿ ಬಲ
ಪಂಕದಲಿ ಮಲಗಲಾ ಯಮಕಸಾಲಮಕಾಲ
ಪುಷ್ಪಿತಂ ಪುಷ್ಪವೃಷ್ಟಿಯ ತಥಾಗತನಲ್ಲಿ
ಕರೆದು ಪೂಜಿಸೆ, ದಿವ್ಯ ಮಂದಾರಸುಮವಂತ
ರಿಕ್ಷದಿಂದಾತನಲಿ ಸುರಿದು ಪೂಜಿಸೆ, ದಿವ್ಯ
ಚೂರ್ಣಚಂದನವಂಬರದಿನೆರಚಿ ಅವನ ಮೆ
ಯ್ಯಾಡಿ ಪೂಜಿಸೆ, ದಿವ್ಯ ಸಂಗೀತ ಗಗನವಂ
ಮೊಳಗಿ ಪೂಜಿಸೆ ದಿವ್ಯ ಸಂಗೀತ ಗಗನವಂ
ತೀವಿ ಕೇಳಿಸಿ ತಥಾಗತನ ಪೂಜಿಸಲದ
ನ್ನಾರಯ್ದು ಸುಗತನಿಂತೆಂದ—'ಕೇಳಾನಂದ,
ಈ ಯಮಕಸಾಲದೀ ದಿವ್ಯ ಮಂದಾರದೀ
ಹೂಮಳೆಯೊ, ಈ ದಿವ್ಯ ಚಂದನದ ಸಿಡಿಮಳೆಯೊ,
ಈ ದಿವ್ಯ ತೂರ್ಯಸ್ವರವೋ, ದಿವ್ಯ ಗಾಯನವೊ
ಇವುಗಳಿಂ ಸುಗತನಿದೊ ಸತ್ಕೃತಂ, ಗುರುಕೃತಂ,
ಮಾನಿತಂ, ಪೂಜಿತಂ ತಾನಲ್ಲ ! ಆನಂದ
ಯಾವ ಭಿಕ್ಷುವೊ ಭಿಕ್ಷುಕಿಯೊ ಮೇಣುಪಾಸಕನೊ
ಮೇಣಾವುಪಾಸಿಕೆಯೊ ಧರ್ಮಾನುಧರ್ಮವಂ
ಪ್ರತಿ ಪಾದಿಪಂ ಸಮೀಚೀನನಹನನುಧರ್ಮ
ಚಾರಿಯಹನವರಿಂ ತಥಾಗತಂ ಸತ್ಕೃತಂ,
ಗುರುಕೃತಂ, ಮಾನಿತಂ, ಪರಮ ಪರಿಪೂಜಿತಂ
ತಾನಹಂ. ಕೇಳದರಿನಾನಂದ ನೀವೆಲ್ಲ
ಧರ್ಮಾನುಧರ್ಮವಂ ಪ್ರತಿಪಾದಿಸಿರಿ ! ಸಮೀ
ಚೀನರಂತನುಧರ್ಮಚಾರಿಯಾಗಿರಿ ! ಮತ್ತೆ
ಲೋಕಕಿಂತೆಯೆ ಕಣಾ ಕಲಿಸಿರಾನಂದ !'

ಆನಂದನಾಗ 'ಭಗವಂತ, ಚಾತುರ್ಮಾಸ್ಯ
ಕಳೆವುದೆ ತಥಾಗತನ ದರ್ಶನಕೆ ಬರುತಿದ್ದ

ಭಿಕ್ಷುಗಳನಿನ್ನೆಗಂ ಕಾಣುತಿದ್ದೆವಾಗಕಟ
ಭವಂತ್ಯನಯಿಸಲಾ ಲಾಭವೆಲ್ಲಿ ?' ಎನೆ,
ಭಗವಂತನದಕೆಂದ—'ಆನಂದ, ಭಿಕ್ಷುಗಳ
ಕಂಡಲ್ಲ, ಶ್ರದ್ಧಾಳುವೆಲ್ಲಿದೊ ತಥಾಗತಂ
ಜನಿಸಿದನೊ, ತಾನೆಲ್ಲಿ ಸಂಬೋಧಿ ಹೊಂದಿದನೊ,
ಮೊದಲೆಲ್ಲಿ ಧರ್ಮಚಕ್ರಂ ಪ್ರವರ್ತಿಸಿದನೋ,
ಎಲ್ಲಿ ಪರಿನಿರ್ವಾಣವಡೆದಪನೊ, ಈ ಆದರ್ಶ
ನೀಯ ನಾಲ್ದಾಣಗಳ ಸಂಚಾರಿಕದಿ ಕಾಲವಂ
ಕಳೆಯೆ ಮರಣಾತ್ಪರ ಸಗ್ಗದಲಿ ಹುಟ್ಟುವಂ.
ಆನಂದನಿನ್ನು 'ಭಗವಂತ, ಹೆಂಗಸರೊಡನೆ
ಎಂತು ವರ್ತಿಸಲಕ್ಕು ?' ಎನಲು, 'ಕೇಳಾನಂದ,
ನೋಡದಿರಿ', 'ಭಗವಂತ? ನೋಡಬೇಕಾಗೆ ನಾ
ವೇಂ ಗೆಯ್ಯಲಕ್ಕು ?' ಎನೆ, 'ಆನಂದ, ಅವರೊಡನೆ
ಮಾತಾಡದಿರಿ', 'ಅವರೆ ನಮ್ಮೊಡನೆ ಮಾತಾಡೆ
ಏನೆಸಗಲಕ್ಕು ಭಗವಂತ ?' ಎನೆ, 'ಆನಂದ
ಅಂತಾಗೆ ಹಿರಿಯರು ತಾಯೆಂದು, ಸರಿಯರ
ನ್ನಕ್ಕ ತಂಗಿಯರೆಂದು, ಕಿರಿಯರಂ ಕೂಸೆಂದು
ಭಾವಿಸುತ ಕಟ್ಟೆಚ್ಚರಿರಿ' ಎಂದನಮಿತಾಭ.
ಆನಂದನಾಗ 'ಭಗವಂತನ ಶರೀರದಾ
ಅಂತಿಮ ವ್ಯವಸ್ಥೆಯನ್ನೆಂತೆಸಗಬೇಕು ?' ಎನೆ,
'ಆನಂದ, ಸುಗತನ ಶರೀರಕಂತಿಮ ಪೂಜೆ
ಸಲಿಸೆ ಪೇಚಾಡದಿರಿ ; ಸುಗತನಲಿ ಶ್ರದ್ಧಾಳು
ವೆನಿತೊ ಬ್ರಾಹ್ಮಣರೆನಿತೊ ಕ್ಷತ್ರಿಯರು ಬಂದದಂ
ನೆರವೇರಿಸುವರು, ನೀವಾದರೆ ಸದರ್ಥದಲಿ
ಘಟಸಿರಿ, ಸದರ್ಥವನ್ನನುಯೋಜಿಸಿರಿ, ಸಾವ
ಧಾನಿಸಿರಿ, ಉದ್ಯೋಗಿಸಿರಿ !' ಎಂದ ಸುಗತಂ.

ಆಗಳಾನಂದಂ ವಿಹಾರವನ್ನೊಳವೊಕ್ಕು
ಕಪಿಶೀರ್ಷಕೊರಗಿಸಲ ನಿಂದಕಟಿನ್ನು ಶೈಕ್ಷನಹೆ
ನನಿತರೊಳೆ ಶಾಸ್ತನಿದೊ ಪರಿನಿರ್ವೃತಿಸಲಿರುವ

ನೆನಿತೆನ್ನೊಳಾತನನುಕಂಪೆ ! ಮುಂಜಾವದಲಿ
ಮೊಗತೊಳೆಯೆ ನೀರನಿನ್ನಾರಿಗಾಂ ತಹೆ ? ಯಾರ
ಕಾಲನೊರಸುವೆ ? ಯಾರ ಹಾಸ ಹಾಸುವೆ ? ಯಾರ
ಪತ್ತಚೀವರವೆತ್ತಿ ಹಿಡಿದೆ ? ಸೇವಿಸುವೆನಿ
ನ್ನಾರನಿನ್ನಾರೆನಗೆ ಶಾಸ್ತನೆಂದಳುತಿರಲು,
ಬುದ್ಧನಾನಂದನೆಲ್ಲಿಹನೆಂದು ಕೇಳಿ, ಕೆಲ
ದೊಳೆ ವಿಹಾರದೊಳಳುವನೆಂದರಿತು ಕರತರಿಸಿ,
ಇಂತೆಂದನಾತನಿಗೆ--"ಶೋಕಿಸದಿರಾನಂದ.
ಪ್ರಿಯವೆಲ್ಲವಿಂದ ನಾವಗಲಬೇಕೆಂದವಂ
ನೀಗಬೇಕೆಂದವುಗಳಿಂ ಬೇರೆಯಾಗಬೇ
ಕೆಂದು ನಿನಗಾನಂದ ಮುನ್ನೆ ನಾನರುಹಿಲ್ಲ ?
ಯಾವುದಕೆ ಹುಟ್ಟಿದೆಯೊ ಇರವಿದೆಯೊ ಬೆಳವಿದೆಯೊ
ನಾಶಧರ್ಮಕೆ ಸಾಜದಿಂದದೀಡಾಗಿರಲು
ನಾಶವದಕಿಲ್ಲದಿರೆ ಶಕ್ಯವೇನಾನಂದ ?
ಮರುಗದಿರು, ದೀರ್ಘಕಾಲದ ಮನೋವಾಕ್ಕಾಯ
ಮೈತ್ರದಿ ತಥಾಗತನಿಗತಿನಿಕಟನಹೆ, ಪುಣ್ಯ
ವಂತನಹೆ ; ಅನುಯೋಜಿಸಯ್ಯ, ಕ್ಷಿಪ್ರಮೆಯಿಂ ಅನಾ
ಸ್ರವನಪ್ಪೆ ಆನಂದ !' ಆನಂದನಾಗ, ಕಂ
ಗಣ್ಣನೊರಸುತ, ಬಗಿದ ಕೊರಳ ಸಡಲಿಸುತ, ಭಗ
ವಂತನೀ ಕುಶಿನಾರದಂಥ ಕೀಳೂರಲ್ಲಿ
ಜಾಂಗಲ ನಗರದಲ್ಲಿ ಪರಿನಿರ್ವೃತಿಸಲೇಕೆ ?
ಪಂಚತ್ವವಯ್ದಲಾ ಯೂಥನಾಥಗೆ ಮಹಾ
ಕಾಂತಾರವಲ್ಲದೇಂ ಕಿರಿಯ ಕಟ್ಟೆಯೆ ? ಅಸ್ತ
ವಯ್ದಲಾ ಲೋಕಲೋಚನಗೆ ಪಾರಾವಾರ
ವಲ್ಲದೇಂ ಕ್ಷುದ್ರ ಸರಸಿಯೆ ? ನೋಡ ಭಗವಂತ,
ಚಂಪೆ ಇಲ್ಲಾ ? ರಾಜಗೃಹವಿಲ್ಲ ? ಶ್ರಾವಸ್ತಿ
ಇಲ್ಲ ? ಸಾಕೇತ-ಕೌಶಾಂಬಿ ಇಲ್ಲಾ ? ವಾರ
ಣಾಸಿಯಿಂ ಇಲ್ಲಾ ? ಅವಲ್ಲಾವೊಂದರಲ್ಲಿ ಪರಿ
ನಿರ್ವೃತಿಸಬಹುದಲ್ಲ ? ಸುಗತನಲಿ ಶ್ರದ್ಧಾಳು
ವೆನಿತೊ ಬ್ರಾಹ್ಮಣರೆನಿತೊ ಕ್ಷತ್ರಿಯರು ಧನಿಕರ

ಲ್ಲಿಹರವರು ಬಂದು ಭಗವಂತನ ಶರೀರವಂ
ಪೂಜಿಸುವರೆನೆ, ತಥಾಗತದಕೆ ಇಂತೆಂದ--
'ಅಂತೆನದಿರಾನಂದ, ಈ ಊರ ಕೀಳೂರು
ಜಾಂಗಲ ನಗರವೆನ್ನದಿರು. ಎನಿತೊ ಹಿಂದೊಮ್ಮೆ
ಕೇಳ್ದೈ [೩೨] ಮಹಾಸುದರ್ಶನನೆಂಬ ಧಾರ್ಮಿಕಂ
ಚಕ್ರವರ್ತಿಯ ರಾಜಧಾನಿಯಾದೀ ಕುಶಾ
ವತಿ, ಯಕ್ಷಧಾನಿ[೩೩] ಅಳಕಮಂದಮಾಕೀರ್ಣ
ಯಕ್ಷಮೆಂತು ಸುಭಿಕ್ಷಮೆಂತಂತೆ ಬಹುಜನಾ
ಕೀರ್ಣಂ ಸುಭಿಕ್ಷಂ ಗಡಾ ತಾನೆನಿಸಿ, ಹಸ್ತಿ
ಶಬ್ದದಿಂದಶ್ವಶಬ್ದದಿ, ತೇರ ಶಬ್ದದಿಂ,
ಭೇರಿಶಬ್ದ ಮೃದಂಗಶಬ್ದದಿಂ, ವಲ್ಲಕೀ
ಶಬ್ದದಿಂ, ಗೀತಶಬ್ದದಿ, ಶಂಖಶಬ್ದದಿಂ,
ತಾಲಶಬ್ದದಿ, ತಿನ್ನಿ ಕುಡಿಯಿಮಾನಂದಿಸಿರಿ
ಎಂಬೀ ದಶಮ ಶಬ್ದದಿಂದ ಹಗಲಿರುಳೆಂತು
ಗಲಗಲಿಸುತಿತ್ತು? ನೀನಿನ್ನು ಕುಶಿನಾರವ
ನ್ನಯ್ದಿ ಆನಂದ, ಅಲ್ಲಿಯ ಮಲ್ಲರಿಗೆ ಇಂದು
ರಾತ್ರಿಯಂತಿಮ ಯಾಮದಲಿ ತಥಾಗತನ ಪರಿ
ನಿರ್ವಾಣವಾಗಲಿಹುದೆಂದರುಹಿ ಬಾರ!'

ಅಂತಾಗಲೆಂದು ಆನಂದನಲ್ಲಿಂದೆದ್ದು
ಕುಶಿನಾರಕಯ್ದಿ ಯಾವುದೊ ಕಾರ್ಯಕಾಗಿ[೩೪] ಸಂ
ಸ್ಥಾಗಾರದಲ್ಲಿ ಕೂಡಿರೆ ಮಲ್ಲರಲ್ಲಿ ಒಳ
ವೊಕ್ಕು, 'ವಾಸಿಷ್ಠರೆ[೩೫] ತಥಾಗತಂ ಕುಶಿನಾರ
ದುಪವರ್ತನಡ ಸಾಲವನದೊಳೀ ರಾತ್ರಿಯಂ
ತಿಮ ಯಾಮದಲ್ಲಿ ಪರಿನಿರ್ವಾಣವಡೆದಪಂ !
ಪೇಳ್ದೆನಿದೊ ಬನ್ನಿರಲ್ಲಿಗೆ. ತಥಾಗತನೆಮ್ಮ
ನಗರದೊಳೆ ಪರಿನಿರ್ವೃತಿಸಿದನಾದೊಡಮೆಮಗೆ
ಅವನ ಪಶ್ಚಿಮ ದರ್ಶನಂ ಕಟಾ ಲಭಿಸಿಲ್ಲ !
ಹೊರಗೆ ಪೂರ್ಣಾಧಿಕಮಪೂರ್ವ ಚಂದ್ರಗ್ರಹಣ
ವಾಗಲರಿಯದೆ ನಿದ್ದೆಯೊಳಗೆ ಹೋಗಾಡಿದೆವೆ !

ಎಂದಿನ್ನು ಮರುಗದಿರಿ' ಎಂದರುಹಿ ತೆರಳುವುದೇ
ಮಲ್ಲರೆಲ್ಲರು ಗಂಡುಹೆಣ್ಣು ಒಂದಾಗಿ ಕಡು
ದುಮ್ಮಾನದಿಂದ ಕೂದಲು ಕೆದರಿ ತೋಳ್ಗಳಂ
ನೀಡಾಡಿ ಹೊರಳಾಡಿ, 'ಅಕಟನಿತು ಬೇಗ ಪರಿ
ನಿರ್ವಾಣವಯ್ದುವನೆ ಭಗವಂತ ! ಅಕಟನಿತು
ಬೇಗ ಪರಿನಿರ್ವೃತಿಸುವನೆ ಸುಗತ ! ಇನಿತತಿ
ಕ್ಷಿಪ್ರಮಂತರ್ಧಾನವಹುದೆ ಲೋಕದಿ ಲೋಕ
ಚಕ್ಷುವಕಟಾ !' ಎಂದು ಗೋಳಾಡಿ ಅಳಲಾಡಿ,
ಗಂಡುಹೆಣ್ಣೆಲ್ಲರೊಡಗೂಡಿ ಅಲ್ಲಿಂದೆದ್ದು
ನಡೆದರವರೊಡನೆ ನೆಟ್ಟಗೆ ಸಾಲವನಕೆ.

ಅನಿತರೊಳೆ ತನ್ನ ಬಂಧುವಿನಾಳ್ ದೇಹಾತ್ಯಯಂ
ಕಾಣಲಾರದೆ ಅಕಟ ; ಆದಿತ್ಯನಸ್ತಮಿಸೆ,
ಒಯ್ಯನೊಯ್ಯನೆ ಹಕ್ಕಿ ತಲೆವಾಗಿ ಗೂಡುಗೊಳೆ,
ಬಲವಂದು ಪೋಪವೆನೆ ಗಬ್ಬಿಲಂ ಸುಳಿದಾಡೆ,
ಅಂದೆಮ್ಮ ಕುಂಟುಮರಿಯಂ ಹೆಗಲಿಗೆತ್ತಿ ತಾ
ಯ್ಬಳಿಗೊಯ್ದು ನಮ್ಮಾತನಿವನೆಂದು ಪರಿಚಿಸುತ
ಮನೆಮರಳ್ವ ಕುರಿವಿಂಡುಮಿೞ್ ಕಂಡು ಮೇಮೇಕರಿಸೆ,
ಈ ಶೋಕವಾರ್ತೆಯಂ ಮುಂದಿಳುಹಲೆನೆ ಗಾಳಿ
ಬಟ್ಟೆಯಲಿ ಟಿಟ್ಟಿಭಂ ಟಿಟ್ಟಿಸುತ ತೊಳಲಾಡೆ,,
ಸುಗತನಂ ಬೀಳ್ಕೊಡುವ ಪಶ್ಚಿಮೋತ್ಸವದೊಳೆ
ತ್ರೈತ್ತಲುಂ ಬೆಳೆವ ದೀಪಾವಳಿಯೊ ಎನಲು ಮನೆ
ಮನೆಯ ದೀಪಂ ಮಿಂಚುಹುಳದ ದೀಪಂ ಬೆರಸು
ಬಾನೊಳಂತೆಯೆ ನೀರೊಳುಡುವ ದೀಪಂ ಬೆಳಗೆ,
ಅಂದಿಗಿದೆ "ವೈಶಾಖ ಪೂರ್ಣಮಿಗೆ ಜನಿಸಿ ಮೇ
ಣಂದಿಗದೆ ವೈಶಾಖ ಪೂರ್ಣಮಿಯೊಳಿರುಳು ಪರಿ
ನಿರ್ವಾಣ ಹೊಂದುವೆನ್ನಾತನನ್ನಿರುಳುದ್ದ
ಕೊನೆಗೊಮ್ಮೆ ಕಣ್ದೀವೆ ಕಾಂಬೆನಿಂದೆನೆ ಮಂಜು
ಕಂಬನಿಯ ಮಿಡಿಯುತ್ತ ತೊಡೆಯುತ್ತಲಿದೊ ಸುಧಾ
ಸ್ಫೂರ್ತಿ ಮೂಡಣ ಗಗನದಲಿ ನುಣ್ಣನಡರಿ ಬರೆ,

ದುಮ್ಮಾನದಿಂ ಮಲ್ಲರಳಲಾಡಿ ಗೋಳಾಡಿ
ಗಂಡುಹೆಣ್ಣೆಲ್ಲರೊಡಗೂಡಿ ನಡೆತೆರೆ ಸಾಲ
ವನಕನಿಬರಂ ಕಾಣಲಾನಂದಗಿಂತೆನಿಸಿ
ತಾಗ—'ಇವರಿನಿಬರನೊಬ್ಬೊಬ್ಬನಾಗಿ ವಂ
ದೀಸಲೀಯೆ ಭಗವಂತನಂ ಮಲ್ಲರಿವರೆಲ್ಲ
ವಂದಿಸುವ ಮುನ್ನಮೆ ವಿಭಾತಿಸದಿರದು ರಜನಿ !
ಆದರಿನಿವರಂ ಕುಲಕ್ರಮದಿಂದ ವಿಂಗಡಿಸಿ
ಒಂದೊಂದೆ ಕುಲವ ಭಗವಂತಗೊಪ್ಪಿಸುತ, ಭಗ
ವಂತ ಇತ್ಥಂನಾಮ ಮಲ್ಲಂ ಸಪುತ್ರಂ ಸ
ಭಾರ್ಯಂ ಸಪರಿವಾರಮಿದೊ ನನ್ನ ಪದಯುಗಕೆ
ತಲೆವಾಗಿ ವಂದಿಸುವನೆಂದಿವರ್ಗೆ ಸುಗತನ
ನ್ನಂತು ವಂದಿಸಲೀವೆ.' ಇಂತೆಂದು ಆನಂದ
ಮಲ್ಲರವರಂ ಕುಲಕ್ರಮದಿಂದ ವಿಂಗಡಿಸಿ,
ಕಾರಿರುಳಿನಲಿ ರಾಜಬೀದಿಯಲಿ ಕೈಪ್ಪಂಜ
ನೆತ್ತಿ ಹೋಹಂದು ಬೆಳಕೊಂಡೊಂದೆ ನುನೆದೋರಿ
ಮಿಕ್ಕವಂ ಬಿಡುವಂತೆ, ಒಂದೊಂದೆ ಕುಲವ ಮುಂ
ದರಿಸಲಾ ಕುಲವಂತು ಭಗವಂತನಡಿಗೆರಗಿ
ಬಲವಂದು ಕೆಯ್ಮುಗಿದು ಬಳಸಿ ನಿಂದಿರೆ, ತಥಾ
ಗತನವರನೆಲ್ಲ ಕುಳ್ಳಿರಿಸುತಿಂತೆಂದಂಶಿಲ——

'ವೀರರಿರ, ವೀರಸೂಗಳಿರ್ಕೆ, ಕೇಳಿರಿ ನಿಮಗೆ
ಧರ್ಮವ ಸಮಾಸತಃ ಪೇಳ್ವೆ. ನೂರಾಳ್ಗಳಂ
ರಣದಿ ಗೆದ್ದವಗಿಂತ ತನ್ನ ತಾಂ ಗೆದ್ದವನೆ
ಜೇತರೊಳಗುತ್ತಮಂ, ನಿರ್ವೈರದಿನೆ ವಿನಾ
ವೈರದಿಂದಾ ವೈರವಾರದಕ್ರೋಧದಿಂ
ಕ್ರೋಧವಂ, ಸಾಧುತನದಿಂದಲೆ ಅಸಾಧುವಂ,
ದಾನದಿ ಕದರ್ಯವಂ, ಸತ್ಯದಿನಸತ್ಯವಂ
ಗೆಲಲಕ್ಕು. ರಾಗದೊಲು ಕಿಚ್ಚಿಲ್ಲ, ದ್ವೇಷದೊಲು
ನೆಗಳಿಲ್ಲ, ಮೋಹದೊಲು ಬಲೆಯಿಲ್ಲ, ತೃಷ್ಣೆಯೊಲು
ಸೆಳವಿಲ್ಲ, ಶಾಂತಿಯಂ ಮಿಕ್ಕನ್ಯ ಸುಖವಿಲ್ಲ.

ಕಳ್ಳು, ಕೊಲೆ, ಕಳ್ಳತನ, ಸುಳ್ಳು, ಹಾದರ, ಮೋಸ
ವತಿತಿಂಡಿ, ಜೂಜಿವಕೆ ಗಂಟುಬಿದ್ದವನಿಲ್ಲೆ
ತನ್ನ ಬೇರಗೆದಪಂ, ಮಲ್ಲರಿರ ಆದುದರಿ
ನಾ ವ್ಯಸನಗಳ ಗೋಜಿಗಾಗದಿರಿ. ಮೆಯ್ಗಳ್ಳ
ರಾಗದಿರಿ ! ನಿದ್ದೆಗೀಡಾಗದುದ್ಯೋಗಿಸಿರಿ.
ನೆಣವೆಂತು ಕರಗುತಿದೆ ಮತಿಯಂತು ಮಿರುಗುತಿದೆ.
ತಾಯ್ತಂದೆಯರ ಸದಾ-ಸೇವಿಸಿರಿ, ಮಕ್ಕಳಂ
ಮಡದಿಯನ್ನರ್ತಿಸಿರಿ. ಶ್ರದ್ಧೆ, ಶೀಲಂ, ಲಜ್ಜೆ,
ಲೋಕಾಪವಾದಭಯ, ವಿದ್ಯೆ, ಸ್ವಾರ್ಥತ್ಯಾಗ,
ಪ್ರಜ್ಞೆ ಎಂಬಗ್ನಿಯಿಂ ಸುಡದ, ನೀರಿಂ ನಾಂದ
ದರಸರುಂ ಕಳ್ಳರುಂ ದಾಯಾದರುಂ ದೋಚ
ದೀ ಸಪ್ತಧನವ ಸಂಗ್ರಹಿಸಿ. ವಾಸಿಷ್ಠರಿರ,
ತನ್ನ ಜೀವವ ತೇದು ತನ್ನೇಕಸುತನ ತಾ
ಯೆಂತು ರಕ್ಷಿಪಳಂತೆ ನಿಂತಲ್ಲಿ ನಡೆವಲ್ಲಿ
ಕುಳಿತಲ್ಲಿ ಕೆಡೆವಲ್ಲಿ ಎಚ್ಚರಿರುತೆಲ್ಲವಾ
ಜೀವಿಗಳೊಳಪರಿಮಿತ ಮೈತ್ರವಂ ತೋರುತಿರಿ;
ಇದನೆ ಬ್ರಹ್ಮವಿಹಾರವೆಂಬರಿದೊ ಮಲ್ಲರಿರ
ಅಪ್ರಮಾದವೆ ಅಮೃತಪದವೆಂಬುದರಿನಪ್ರ
ಮತ್ತರಾಗಿರಿ. ನಿಮ್ಮ ಧರ್ಮವಂ, ನಿಮ್ಮ ಸಾ
ಮ್ರಾಜ್ಯವನ್ನನ್ಯರಲಿ ಹೊರಿಸೆ ಮೇಲ್ವಾಯದಿರಿ.
ಯಾರನ್ಯ ಧರ್ಮವಂ, ಯಾರನ್ಯ ಜನಗಳ
ಸ್ವಾತಂತ್ರ್ಯವಂ ಮನ್ನಿಸುವರೊ ತಮ್ಮದರಂತೆ,
ಅವರ ಧರ್ಮಂ, ಜನಂ, ಸ್ವಾತಂತ್ರ್ಯ ಬಾನಂತೆ
ಬೆಳೆಯುತಿದೆ ; ಯಾರನ್ಯ ಧರ್ಮವನ್ನನ್ಯರ
ಸ್ವಾತಂತ್ರ್ಯ ಕೆಡಿಸುವರೊ ಅದರ ಧರ್ಮಂ, ಜನಂ,
ಸ್ವಾತಂತ್ರ್ಯವೆದ್ದ ತೆರೆಯಂತೆ ಕುಸಿದಳಿಯುತಿದೆ.
ಆದುದರಿನಾರೊಳಂ ಸರ್ವಥಾ ಮೇಲ್ಗಯ್ಯ
ನೆತ್ತದಿರಿ, ಕಡೆಗದರಿನಾತ್ಮನಿರ್ಮೂಲನಂ
ಹೊರತು ದೀರ್ಘಂ ಬಾಳ್ದರಿಲ್ಲ, ಬಳೆದವರಿಲ್ಲ,
ಪ್ರತ್ಯೇಕ ಮಾನುಷಮಮಾನುಷಂ ಕಾರ್ಯಕಿದೆ

ತತ್ಸಮಂಳಿಂ ಪ್ರತಿಕಾರ್ಯಮವದೆ ಗಡಾ ಪ್ರಕೃತಿಯವಿ
ಕಾರ್ಯ ನಿಯಮಮಂ. ಕೊನೆಗೆ ವಾಸಿಷ್ಠರಿರ ಕೇಳಿ,
ತನ್ನೊಲನ್ಯರ ಬಗೆಯಿ, ತನ್ನೊಲನ್ಯರೊಳೊಲಿಯಿ,
ಎಲ್ಲರಲಿ ದಯೆದೋರಿ, ಯಾರನುಂ ಹಗೆಯದಿರಿ.
ತಾನನ್ಯಗೆಸಗಿದಾ ಕೆಡುಕೆ ತನ್ನಯ ಕೆಡುಕು,
ಒಳಿತೆ ತನ್ನಯ ಒಳಿತು. ಯಾವ ಪಾಪವನಾನು
ಮೆಸಗದಿರಿ, ಒಳ್ಳಿತನೆ ಎಸಗುತಿರಿ, ಚಿತ್ತವಂ
ಶುದ್ಧಿಸಿರಿ, ಇದೆ ಗಡಾ ಬುದ್ಧರನುಶಾಸನಂ !'
ಈ ಸುಧಾಸೂಕ್ತಿಯಂ ಮಲ್ಲರಾಲಿಸುತ, 'ಭಗ
ವಂತ, ಮಳೆಗರೆಯೆ ಕೊಳಗಳ ಹಾಂಸೆ ಹೋಹಂತೆ,
ಬರಿಯ ದೋಣೆಯೊಳಗೆ ಕಣೆ ತೀವಂತೆ, ನೆಲಹತ್ತಿ
ದಂಬಿಯಿಂ ನೀರ ಮೊಗೆದಂತೆ, ನೂರಾರು ಜಲ
ಕುಂಭದಲಿ ತರಣಿ ನೆರೆವಂತೆ, ಬಡಬಗ್ಗನಿಗ
ಯಾಚಿತಂ ಕಾಲೆಡವಿ ನಿಧಿಯೊದವಿದಂತೆಮಗೆ
ಭಗವಂತನಿಂದ ಧರ್ಮರಿ ತಿಳಿದುದಜ್ಞಾನ
ವಳಿದುದೈ ಜಯಜಯಾ !' ಎಂದು ಜೋಹರಿಸುತಾ
ಮಲ್ಲರೆಲ್ಲರು ತೆರಳಲಿರುಳ ಮೊದಲಿನ ಜಾಮು
ಸರಿಯೆ ಮೃಗಲಾಂಛನಂ ಮಾರುದ್ಧವರಿದಂ.

ಆಗ ಕುಶಿನಾರದಲ್ಲಿರುವೊರುವನಾ ಪರಿ
ವ್ರಾಜಕ ಸುಭದ್ರನಿದೊ ಇಂದಿನಿರುಳಿನ ಕೊನೆಯ
ಜಾಮದೊಳೆ ಶ್ರಮಣ ಗೌತಮನ ಪರಿನಿರ್ವಾಣ
ಮಹುದೆಂದು ಕೇಳಿ, ಕೂಡಲೆ ಸಾಲವನಕಯ್ದಿ
ಆನಂದನೊಡನೆಂದ–'ವೃದ್ಧರಿಂ ಪ್ರಾಚಾರ್ಯ
ರಾಚಾರ್ಯರಿಂ ಮಹಲ್ಲಕ ಪರಿವ್ರಾಜಕರಿ
ನೆಂದೊ ಒಮ್ಮೊಮ್ಮೆ ಇಹಲೋಕದಿ ತಥಾಗತಂ
ಜನಿಸುತಿಹನೆಂದು ಕೇಳಿರುವೆನಿಂದಿರುಳಿನೊಳೆ
ಶ್ರಮಣ ಗೌತಮನ ಪರಿನಿರ್ವಾಣವಹುದಂತೆ,
ಕಡಲ ನಡಸುವ ಶೈಲದೀಪವಾರುವುದಂತೆ,
ನಾಡನೂಡಿಸುವ ಸ್ರವಂತಿ ಬತ್ತುವುದಂತೆ !

ನನ್ನ ಮನಕದಡಿಸುವ ಶಂಕೆಯನವಂಗರುಹೆ
ಧರ್ಮೋಪದೇಶದಿಂದವನದಂ ಮಾಣಿಸುವ.
ಕೊಳಚೆ ನೀರೊಳಗೆಣ್ಣೆ ಹುಯ್ದಂತೆ, ಕಣ್ಣ ಪರೆ
ತೆಗೆದಂತೆ, ಇನನಿರುಳ ತೆರೆವಂತೆ ಕಾಣಿಸುವ
ನೆಂದು ನಂಬಿರುವೆನದರಿಂ ಶ್ರವಣ ಗೌತಮನ
ದರ್ಶನವನೆನಗೆ ದೊರಕೊಳಿಸೆಯಾ ಆನಂದ ?'
ಆನಂದನೆಂದ—— 'ಕಾಡಬೇಡೈ ತಥಾ
ಗತನ- ಗೆಳೆಯ ಸುಭದ್ರ, ದಣಿದಿಹಂ ಭಗವಂತ."
ಮತ್ತೊಮ್ಮೆ ಮಗುಳೊಮ್ಮೆ ಅಂತ ಯಾಚಿಸೆ ಪರಿ
ವ್ರಾಜಕ ಸುಭದ್ರನದಕಂತೆ ಆನಂದನು
ತ್ತರವೀಯಲವರ ಸಂಭಾಷಣವನಾಲಿಸಿದ
ಭಗವಂತನಾನಂದನಂ ಕರೆದು, ಆನಂದ
ತಳುವದೆ ಸುಭದ್ರಗೆ ತಥಾಗತನ ಕಾಣಿಸಾ,
ಯಾವುದಂ ಕೇಳುವನೊ ನನ್ನನಾತನದೆಲ್ಲ
ಜಿಜ್ಞಾಸೆಯಿಂದಲ್ಲದೆನ್ನ ಕಾಡುವನಲ್ಲ,
ಕಾಂಬೊಡನೆ ಕಣ್ಣು ಬಾಂದಳವನೊಳಕೊಳುವಂತೆ
ಹೆಚ್ಚುವುದೆ ದೀವಿಗೆಯ ಬೆಳಕು ಮನೆದೀವಂತೆ,
ಜಾಳಿಗೆಯ* ತೆರೆವೊಡನೆ ಗಾಳಿಯೊಳವೊಗುವಂತೆ,
ನನ್ನ ಮಾತನ್ನವಂ ಗ್ರಹಿಸುವಂ ಕ್ಷಣದೊಳಿನೆ,
ಆನಂದಡನೊಡನೈಗೆಳೆಯ ಸುಭದ್ರ, ಬಾರಿತ್ತ
ಲಿದೊ ನಿನ್ನ ಕರೆದಪಂ ಭಗವಂತನೆಂದವನ
ಬುದ್ಧನ ಸಮಕ್ಷಮಕಯ್ದಿಸಲವಂ ಸುಗತನಂ
ವಂದಿಸುತ ಕೆಲದೆ ಕುಳಿತಿಂತು ಕೇಳ್ದಂ——'ಪೂರ್ಣ
ಕಶ್ಯಪಂ, ಮಸ್ಕರೀ ಗೋಪಾಲ, ಮೇಣಜಿತ
ಕೇಶಕಂಬಲಿ, ಪಕುಧ ಕಾತ್ಯಾಯನಂ ಮತ್ತೆ
ಬೇಲಟ್ಠಿಪುತ್ರ, ಸಂಜಯನಂತೆ ನಿರ್ಗ್ರಂಥ
ಜ್ಞಾತಪುತ್ರಂ ಆಗಕಣಾ ಈ ಶ್ರಮಣಬ್ರಾಹ್ಮಣರು,
ಗಣಿಗಳು, ಗಣಾಚಾರ್ಯರುಂ, ಜ್ಞಾತರುಂ, ಯಶ

*ಜಾಳಿಗೆ—ಕಿಟಕಿ.

ಸ್ವಿಗಳು, ತೀರ್ಥಂಕರರು, ಸಾಧುಸಮ್ಮತರು ತಂ
ತಮ್ಮ ಹೇಳಿಕೆಯಂತೆ, ಗೌತಮ, ಗಡಾಭಿಜ್ಞ
ರಹರೆ ? ಅಲ್ಲವೆ ? ಕೆಲಠಭಿಜ್ಞರಿರುವರೆ ? ಕೆಲರ
ಭಿಜ್ಞರಲ್ಲವೆ ? ತಿಳಿಯಪಡಿಸೈ [೬೨]ಭದಂತ !
ಅದಕೆ ಮೆಲ್ಲನೆ ಬುದ್ಧನಿಂತೆಂದ––'ಸಾಕದಂ
ತಿರಲಿ, ಕಿರಿದರೊಳೀಗ ಧರ್ಮವನ್ನುಪದೇಶ
ಗೆಯ್ವೆ, ಕೇಳ ಸುಭದ್ರ. [೬೩]ಕಾಮಸುಖದೊಂದು ಮೇ
ಣ್ದೇಹದಂಡನೆಯದೊಂದಿಂತಿವೆ ಪಥದ್ವಯಂ,
ಹೀನಮುಭಯಮನರ್ಥಕರಮನಾರ್ಯಂ ಗಡಾ !
ಪ್ರವ್ರಜಿತರಿಗೆ ಸಲ್ಲದವರಿನೆರಡಂ ತಥಾ
ಗತನುಳಿದು, [೬೪]ಉಪಶಮದಭಿಜ್ಞೆ ಸಂಬೋಧವಂ
ನಿರ್ವಾಣವಂ ಪಡೆಯಲೀ ಜ್ಞಾನದಾಯಕಂ
ದೃಷ್ಟಿದಾಯಕಮಾರ್ಯವಷ್ಟಾಂಗ ಮಾರ್ಗವೆಂ
ಬಖಿಲಾತಿಶಾಯಿ ಮಧ್ಯಮ ಮಾರ್ಗವಂ ಕಂಡು
ಕೊಂಡಿಹಂ, [೬೫]ದೃಷ್ಟಿ, ಸಂಕಲ್ಪ, ವಚನಂ, ಕರ್ಮ
ವಾಜೀವ, ವ್ಯಾಯಾಮ, ಸ್ಮೃತಿ, ಸಮಾಧಿ, ಇವೆಂಟು
ಸಮ್ಯಕಾಗಿರಲದುವೆ ಆರ್ಯವಷ್ಟಾಂಗಿಕಂ
ಮಾರ್ಗ ! ಕೇಳ ಸುಭದ್ರ, ಜನ್ಮಗಡ ದುಃಖ, ಜರೆ
ದುಃಖ, ವ್ಯಾಧಿಯೆ ದುಃಖ, ಮರಣಂ ಗಡಾ ದುಃಖ
ಅಪ್ರಿಯ ಸಮಾಗಮವೆ ದುಃಖ, ಪ್ರಿಯರ ವಿಯೋಗ
ವದೆ ದುಃಖ, ವಾಂಛಿತಾಲಾಭ ಗಡ ದುಃಖವೀ
ದುಃಖಗಳೇ ದಲ್ ಪ್ರಥಮಮಾರ್ಯಸತ್ಯಂ, ಮತ್ತೆ
ದೈಹಿಕ ಸುಖಾಭಿಲಾಷೆಯ ಕಾಮತೃಷ್ಣೆ, ಭವ
ಭವಗಳಭಿಲಾಷೆಯಾ ಭವತೃಷ್ಣೆ, ಮರುಭವವ
ತೊಡೆದು ಕೊಳುವಾ ವಿಭವತೃಷ್ಣೆ, ಈ ತೃಷ್ಣೆಗಳೆ
ದುಃಖಕಾರಣವೆಂಬುದದೆ ಎರಡನೆಯ ಆರ್ಯ
ಸತ್ಯ. ಆ ತೃಷ್ಣೆಗಳನೆಲ್ಲ ವೈರಾಗ್ಯದಿಂ
ನಿಪ್ಪಟ ನಿರೋಧಿಸಿ ಪರಾಙ್ಮುಖಿಸಿ ನೀಗಿ ಬಿಸು
ಟವುಗಳಂ ನೆರೆ ಮುಕ್ತನಹುದೆ ದುಃಖನಿರೋಧ

ವೆಂಬ ಮೂರನೆಯಾರ್ಯಸತ್ಯ. ದುಃಖನಿರೋಧ
ಗಾಮಿ ಮಾರ್ಗವೆ ನಾಲ್ಕನೆಯ ಆರ್ಯಸತ್ಯವಾ
ಮಾರ್ಗವೆನೆ ಆರ್ಯವಷ್ಟಾಂಗ ಮಾರ್ಗಂ ಕಣಾ !
ಆ ಮಾರ್ಗದೊಳೆ ನಡೆಯೆ ಉಪಶಮವಭಿಜ್ಞೆಯುಂ,
ಸಂಬೋಧವಂ, ಕೊನೆಗೆ ರಾಗ-ಮೋಹ-ದ್ವೇಷ
ವಳಿದು ನಿರ್ವಾಣವೆಂಬಚ್ಯುತಪದಂ ಪಡೆವೆ !
ಮತ್ತೆ ಕೇಳ ಸುಭದ್ರ, ಅಷ್ಟಾಂಗಿಕಂ ಮಾರ್ಗ
ಯಾವ ಧರ್ಮದೊಳಿಹುದೊ ಶ್ರಮಣದಲ್ಲಿರಹಂ,
ಬೇರೆ ಧರ್ಮದಿ ಶ್ರವಣನಿಲ್ಲವೀ ಧರ್ಮದೊಳೆ
ಅಷ್ಟಾಂಗ ಮಾರ್ಗವಿದೆ, ಶ್ರಮಣನಿದರಲ್ಲಿಹಂ,
ಲೋಕವರ್ಹಂತರಿಂ ಶೂನ್ಯವಾಗದ ತೆರದಿ
ಭಿಕ್ಷುವೀ ಧರ್ಮದೊಳೆ ಸಮ್ಯಗ್ವಿಹಾರಿಸುಗೆ.
ಕುಶಲವನ್ನರಸಿ ಇಪ್ಪತ್ತು ಮೇಣೊಂಬತ್ತ
ನೆಯ ವಯಸೊಳಾಂ ಪರಿವ್ರಜಿಸಿಂದಿಗಾದುದ
ಯ್ವತ್ತೊಂದು ವರುಷವಷ್ಟಾಂಗ ಮಾರ್ಗದ ಹೊರತು
ಧರ್ಮಪ್ರದೇಶದಲಿ ವರ್ತಿಸುವ ಶ್ರಮಣನೆನೆ,
ಗೋಳಿಯಾ ೞೀಅರಳಂತೆ ಗಾಳಿಯಾ ನೆರಳಂತೆ,
ಗರಿಯಿರದ ಖಗದಂತೆ, ಹೆರೆಬಿಡದುರಗದಂತೆ,
ಯಾರಿಲ್ಲ.’ ಅಂತೆನೆ ಸುಭದ್ರಂ, ಭದಂತ ಚೆ
ನ್ನುಡಿದೆ, ಚೆನ್ನುಡಿದೆ ಕವಚಿದುದ ನೇರ್ವಡಿಪಂತೆ,
ಮುಚ್ಚಿದುದ ತೆರೆವಂತೆ, ದಾರಿತಪ್ಪಿರೆ ದಾರಿ
ಯೊರೆವಂತೆ, ಕತ್ತಲಲಿ ಸೊಡರ ತೋರ್ವಂತೀಸಿ
ದಣಿದವಗೆ ನಿಲುಗಾಲು ದೊರೆತಂತೆ, ಕೆರೆಯೊಣಗಿ
ತಳಮಳಿಪ ಮೀಂಗೆ ಮಳೆಗರೆದಂತೆ, ಕಣ್ಣರಸಿ
ಸೋತ ಜೋಯಿಸಗೆ ಹೊಸ ತಾರೆ ಕಾಣಿಸಿದಂತೆ
ಭಗವಂತನಿಂದ ಧರ್ಮ ಪ್ರಕಾಶಿತವಾಯ್ತು !
ಇನ್ನಿದೊ ಭದಂತ, ಭಗವಂತನಿಗೆ ಶರಣೆಂಬೆ ;
ಧರ್ಮಕಾಂ ಶರಣೆಂಬೆ, ಸಂಘಕಾಂ ಶರಣೆಂಬೆ ;
ಭಗವಂತನಂತಿಕದೆದಳೆನಗೆ ಪ್ರವ್ರಜ್ಯೆಯು
ನೀಸುಗೆನ್ನೆ, ಭಗವಂತನಾಗ ‘ಕೇಳ ಸುಭದ್ರ,

ಅನ್ಯತೀರ್ಥಕನಾರುಮಿಾಳಿ ಧರ್ಮ-ವಿನಯದಿ ಪ್ರ
ವ್ರಜ್ಯೆಯಂ ಬಯಸಿ ಬರೆ, ನಾಲ್ಕು ತಿಂಗಳಿಗೆ ಪರಿ
ವಾಸಿಸದ ಮುನ್ನವಂ ಪ್ರವ್ರಜಿಸಲ್ಪಡಲಾರ
ನಾದೊಡಮಿದೊಪ್ಪುವೆಂ ವ್ಯಕ್ತಿಭೇದವನಿಲ್ಲಿ'
ಎಂದು ಭಗವಂತನಾನಂದನಂ ಕರೆದಿದೊ ಸು
ಭದ್ರಗೆ ಪ್ರವ್ರಜ್ಯೆಯಿಾ ಎನ್ನುವುದೆ, ಸಂಧ್ಯಾರ್ಕ
ನಂತಿಕದೆ ಕೆಂಗಲಿಪ ಶುಕ್ರನೆನೆ, ದೀಪಿಕಾ
ಸ್ತಂಭದಿಂ ಕರದೀಪ ಹೆಚ್ಚಿತೆನೆ. ಭಗವಂತ
ನಂತಿಕದೆ ಪಡೆದಂ ಪ್ರವ್ರಜ್ಯೆಯ ತಥಾಗತನ
ಕೊನೆಯ ಸಾಕ್ಷಾಚ್ಛ್ರಾವಕಂ ಗಡ ಸುಭದ್ರಂ.

ತರುವಾಯ ಭಗವಂತನಿಂತೆಂದ-'ಆನಂದ
ಮುಗಿದುದೈ ಶಾಸ್ತನ ಪ್ರವಚನಂ, ನಮಗಿನ್ನು
ಶಾಸ್ತನಿಲ್ಲೈ ಎಂದು ನಿಮ್ಮೊಳಗೆ ಕೆಲವರಿಗೆ
ತೋರಬಹುದಾದೊಡಂತೆಣಿಸದಿರಿ. ಆನಂದ
ಯಾವ ಧರ್ಮವನಾವ ವಿನಯವಂ ಕಲಿಸಿಹೆನೊ,
ಪ್ರಜ್ಞಾಪಿಸಿಹೆನೊ ನಿಮಗಾ ಧರ್ಮವಾ ವಿನಯ
ವನ್ನೆ ನನ್ನತ್ಯಯದ ಬಳಿಕ ನಿಮ್ಮಯ ಶಾಸ್ತ
ನೆಂದು ಬಗೆಯಿರಿ,' ಮತ್ತೆ ಭಿಕ್ಷುಗಳಿಗಿಂತೆಂದ-
'ಭಿಕ್ಷುಗಳೆ, ಬುದ್ಧನಂ ಧರ್ಮವಂ ಸಂಘವಂ
ಮಾರ್ಗವಂ ಕುರಿತು ನಿಮ್ಮೊಳಗಾರಿಗಾದೊಡಂ
ಶಂಕೆಯಿರೆ, ವಿಮತಿಯಿರೆ ಕೇಳಿ ನೀವದನೀಗ.
ಶಾಸ್ತನಕಟೆಮ್ಮ ಸಮ್ಮುಖದೊಳಿರೆ ಕೇಳಿಲ್ಲ
ವಲ್ಲ ! ಎಂದಿದೊ ಮತ್ತೆ ಮರುಗದಿರಿ.' ಇಂತೊಮ್ಮೆ
ಮತ್ತೊಮ್ಮೆ ಮಗುಳೊಮ್ಮೆ ಗೌತಮಂ ನುಡಿದೊಡಂ
ಭಿಕ್ಷುಗಳ ಸೊಲ್ಲಿಲ್ಲ, ಸದ್ದಿಲ್ಲ. ಸರವಿಲ್ಲ.
ಆಗ ಗೌತಮನೆಂದ-'ಭಿಕ್ಷುಗಳೆ ಶಾಸ್ತನಲಿ
ಗೌರವದಿ ಕೇಳದಿಹಿರೇನೊ. ಗೆಳೆಯಂಗಿನ್ನು
ಗೆಳೆಯನರುಹುತ್ತಿರಲಿ.' ಆನಂದನಾಗ-'ಭಗ
ವಂತ ಏನಚ್ಚರಿಯ ! ಏನದ್ಭುತಂ ! ಭಿಕ್ಷು

ಸಂಘವಿದರೊಳಗೊಬ್ಬನಾದೊಡಂ ಭಿಕ್ಷು ಗಡ
ಬುದ್ಧನಲಿ ಧರ್ಮದಲಿ ಸಂಘದಲಿ ಮಾರ್ಗದಲಿ
ಶಂಕೆಯುಳ್ಳವನಿಲ್ಲ ! ವಿಮತಿಯುಳ್ಳವನಿಲ್ಲ !'
ಬುದ್ಧನದಕಾನಂದ, ಈ ಭಿಕ್ಷುಸಂಘದಲಿ
ಬುದ್ಧನಲಿ ಧರ್ಮದಲಿ ಸಂಘದಲಿ ಮಾರ್ಗದಲಿ
ಶಂಕೆಯುಳ್ಳವನಿಲ್ಲ, ವಿಮತಿಯುಳ್ಳವನಿಲ್ಲ
ವೆಂದೆಮ ತಥಾಗತಂ ಬಲ್ಲನೀ ಭಿಕ್ಷುವ
ಯ್ಐನೂರರಲಿ ಕೀಳ ಕೊನೆಯಾತನಾದೊಡೆಮೀಗ
ವೆರಮೆ [೪೮] ಸ್ರೋತಾಪನ್ನನಾಗಿಹಂ, ಮುಂದೆ ಗಡ
ಸಂಬೋಧಿವಡೆಯಲಿಹನೆಂದು ಕೊನೆಗಿಂತೆಂದ–
'ಭಿಕ್ಷುಗಳೆ ಪೇಳ್ವೆ, [೪೯]ವ್ಯಯಧರ್ಮವೀ ಸಂಸ್ಕಾರ,
ಸಾವಧಾನದೊಳೆ ಉದ್ಯೋಗಿಸಿರಿ !' ಇದೆ [೫೦]ಹಂಸ
ಗೀತವಿದೆ ಕೊನೆಯ ವಚನಂ ತಥಾಗತನಾ.

ಅಂದು ವೈಶಾಖ ಪೂರ್ಣಮಿಯ ಕುಜವಾರದಾ
ರಜನಿಯಂತಿಮ ಯಾಮದೊಳಗೆ ಸಾವೆಯ ಕಾಳು
ಬೀಳೆ ಕೇಳಿಸೆ, ಪ್ರಕೃತಿ ನಿಃಶಬ್ದ ನಿಶ್ಚೇಷ್ಟ
ನಿಷ್ಪಂದಮಿರೆ, ಶುಭ್ರ ಜ್ಯೋತಿಷ್ಮತಿಯ ಚಾರು
ಚಂದ್ರಮಂ ಪಶ್ಚಿಮಾಕಾಶಕಿಳಿತಂದು, ಉ
ತ್ತರಶೀರ್ಷವಾಗಿ ಬಲವಂಕದಲಿ ಪಂಚಾಸ್ಯ
ಶಯ್ಯೆಯಲಿ ಮಲಗಿಹ ತಥಾಗತನನಭಿಮುಖಿಸಿ,
ಬೆಳದಿಂಗಳಿಂದಲಾಘಾಲಗುಲ್ಪಂ ಹೊದಿಸಿ
ಅವದಾತಕಾಯನನ್ನವದಾತತರಕರಿಸೆ,
ಮಂದ್ರತಾರಂಬರಿದು ತಾರಮಂದ್ರಂ ಸರಿದು,
ಕೆಳಗಿಂದ ಮೇಲೇರಿ ಮೇಲಿಂದ ಕೆಳಗಿಳಿದು,
ಅಂತೆ ಮೇಲ್ಕೆಳಗುಗಳ ನಡುವೆ ಹಲಸಲ ಹರಿದು,
ನಾದನಂ ಕೊನೆಗೆ ಬಯಲಲಿ ವಿಲೀನವಹಂತೆ,
ಕ್ರಮದಿಂ ತಥಾಗತಂ[೫೧] ಪ್ರಥಮಮಂ ದ್ವಿತೀಯಂ ತೃ
ತೀಯಂ ಚತುರ್ಥಮಾ ಧ್ಯಾನವನ್ನಾ ಮೇಲೆ
ವಿವಿಧಾಯತನಗಳನ್ನಲ್ಲಿಂದ [೫೨]ಸಂಜ್ಞಾನಿ

ರೋಧವ [೫೨]ಸಮಾಪದಿಸಲಾನಂದನನುರುದ್ಧ[೫೩]
ನೊಡನಿದೊ ಭದಂತ, ಪರಿನಿರ್ವಾಣವಯ್ದಿದಂ
ಭಗವಂತನೆನಲಾತನಿಲ್ಲ ಆನಂದ, ಪರಿ
ನಿರ್ವಾಣ ಹೊಂದಿಲ್ಲ ಭಗವಂತ, ಸಂಜ್ಞಾನಿ
ರೋಧವಯ್ದಿರುವನೆನಲಿತ್ತ ಭಗವಂತನಿದೊ
ಸಂಜ್ಞಾನಿರೋಧದಿಂ ಕ್ರಮದಿನವೆ ವಿವಿಧಾಯ
ತನವನಲ್ಲಿಂ ಚತುರ್ಥಂ ತೃತೀಯಂ ದ್ವಿತೀ
ಯಂ ಪ್ರಥಮಾ ಧ್ಯಾನಕಯ್ತಂದನಂತರಂ
ಮಗುಳೆ ದ್ವಿತೀಯಂ ತೃತೀಯಂ ಚತುರ್ಥಮಾ
ಧ್ಯಾನಗಳನಂತನುಕ್ರಮದಿಂ ಸಮಾಪದಿಸಿ,
ನೀರ ಬುದ್ಬುದದಂತೆ, ಕರೆಗುರುಳ್ವ ತೆರೆಯಂತೆ,
ಉದುರ್ವ ತಾರಗೆಯಂತೆ, ಸುರಿದು ಬರಿದಹ ಮೋಡ
ದಂತೆ, ಬತ್ತಿಯುಮೆಣ್ಣೆ ಮುಗಿದು ದೀವಿಗೆಯಂತೆ,
ಕ್ಷಿತಿಜದಿಂ ಸಿಡಿದ ಮಿಂಚಂಬರದೊಳಣೆವಂತೆ
ಭಗವಂತನೊಡನೆ ಪರಿನಿರ್ವಾಣವಡೆದಂ.

ಗಡಗಡನೆ ಪೊಡವಿ ನಡುಗಿತು ಪಡಿಯನೊಡವೆಯಂ
ಸೆಳೆದ ತಕ್ಕಡಿಯಂತೆ ಮುಂಗಾರ ವಾತಾಲಿ
ಗೊಲೆವ ಕದಲಿಕೆಯಂತೆ, [೫೪] ಹೇರ್ದ ನಿಲುಭಾರವಂ
ಜಗ್ಗನೊಗೆದಾ ಹಡಗದಂತೆ ! ತಾರಾಪಥದಿ
ಬಿರಿವೊಯ್ಕೆ ದೇವದುಂದುಭಿ, ಮೊಳಗಿ ಭೀಷಣಂ
ರೋಮಹರ್ಷಣಮಾಯ್ತು ಮೇಘವಿಸ್ಫೂರ್ಜಿತಂ,
ಮೇಣ್ಮುಹೂರ್ತಕೆ ವಿದ್ಯುದವಭಾಸವಾಯ್ತು, ಧಾ
ರಾಸಾರವಾಯ್ತು ! [೫೫] ಬ್ರಹ್ಮಂ ಸಹಂಪತಿಯಾಗ
ಳಿಂತು ಗಾಥೆಯನೊರೆದ–'ಎಂತೀದೃಶಂ ಬಲಾ
ನ್ವಿತನಪ್ರತಿಮನೀ ತಥಾಗತಂ ಸಂಬುದ್ಧ
ನೀ ಶಾಸ್ತನಿಂತು ಪರಿನಿರ್ವೃತಿಸಿದನೊ ಲೋಕ
ದೊಳಗೆ ಜೀವಿಗಳೆಲ್ಲವಂತೆಯೆ [೫೬] ಸಮುಚ್ಛ್ರಯಂ
ತೊರೆದು ಪೋಪರು !' ಬಳಿಕ [೫೭]ದೇವೇಂದ್ರ ಶಕ್ರನೀ
ಗಾಥೆಯನ್ನುಡಿದ–[೫೮]ಸಂಸಾರವೆಲ್ಲವನಿತ್ಯ,

ಉತ್ಪಾದವ್ಯಯಧರ್ಮಿಯಾಗಿ ಹುಟ್ಟುವವಳಿವ
ವದರಿನಿದೊ ಸಂಸ್ಕಾರದುಪಶಮಮದೆ ಸುಖಕರಂ !’
ಆಗಳನುರುದ್ಧನೀ ಗಾಥೆಯಿಂದಿಂತೆಂದ–
“ಸ್ಥಿತಚಿತ್ತನೀತನುಚ್ಛ್ವಾಸಂ ನಿಶ್ವಾಸವಂ
ಸೇದಿಲ್ಲ ! ವೇದನೆಯ ಕುಗ್ಗದೆದೆಯಿಂ ತಾಳಿ
ನಿರ್ವಾಣ ಶಾಂತಿಯನೆ ಗುರಿಗೊಂಡನೀ ಜಸೀ
ಮುನಿಪ ಕಾಲಂ ಗೆಯ್ದು ನಿನ್ನುರಿವ ಬೊಂಬಾಳ
ನಂದುವಂತಿವನ ಚಿತ್ತವಿಮೋಕ್ಷವಾಯ್ತು !’ ಕೊನೆ
ಗಾನಂದನೀ ಗಾಥೆಯಂ ಪೇಳ್ದ–‘ಸರ್ವಗುಣ
ಸಂಪನ್ನ ಸಂಬುದ್ಧನಯ್ದೆ ಪರಿನಿರ್ವಾಣ
ಮೊಡನೆ ಕಳವಳಿಸಿ ಮೇಯ್ಮುಳ್ಳುರಳಿತೆನ್ನ !’

ಭಗವಂತನಂತು ಪರಿನಿರ್ವಾಣ ಹೊಂದುವುದೆ
ನೆರೆದಿರ್ದ ಭಿಕ್ಷುವೊಳವೀತರಾಗರು* ತೋಳ
ನೀಡಾಡಿ ಹೊರಳಾಡಿ, ‘ಅಕಟನಿತು ಬೇಗ ಪರಿ
ನಿರ್ವಾಣವಯ್ದಿದನೆ ಭಗವಂತ ! ಅಕಟನಿತು
ಬೇಗ ಪರಿನಿರ್ವೃತಿಸಿದನೆ ಸುಗತ ! ಇನಿತತಿ
ಕ್ಷಿಪ್ರಮಂತರ್ಧಾನವಾಯ್ತೆ ಜಗದಿಂ ಜಗ
ಚ್ಚಕ್ಷುವಕಟಾ !’ ಎಂದು ಗೋಳಾಡಲವರಲ್ಲಿ
ನೀತರಾಗರನಿತ್ಯವೆಲ್ಲವೀ ಸಂಸ್ಕಾರ
ಏವು ವಿನಾಶಂ ಬಡೆಯದಿರೆ ಮೊಗ್ಗೆ ? ಎಂದು ಸಂ
ತಯಿಸಿ ಕೊಳೆ, ಅನಿರುದ್ಧನಿಂತೆಂದ–‘ಬಾಂಧವರೆ
ಸಾಕು, ಗೋಳಾಡದಿರಿ. ಪ್ರಿಯವೆಲ್ಲವಿಂದ ನಾ
ವಗಲಬೇಕೆಂದವಂ ನೀಗಬೇಕೆಂದು ಮೇ
ಣವುಗಳಿಂ ಬೇರಾಗಬೇಕೆಂದು ಮುನ್ನೆಮಗೆ
ಎನಿತೊ ಸಲ ಭಗವಂತನರುಹಲಿಲ್ಲಾ ? ಬಗೆಯಿ
ಯಾವುದಕೆ ಹುಟ್ಟಿದೆಯೊ ಇರವಿದೆಯೊ ಬೆಳವಿದೆಯೊ
ನಾಶಧರ್ಮಕೆ ಸಾಜದಿಂದದೀಡಾಗಿರಲು

*ಅವೀತರಾಗರು = ಇನ್ನೂ ವೈರಾಗ್ಯವನ್ನು ಹೊಂದಿಲ್ಲದವರು.

ನಾಶವದಕಿಲ್ಲದಿರೆ ಶಕ್ಯವೇಂ ಭಿಕ್ಷುಗಳೆ ?
ಅಂತೆಂದು ಕೆಡೆದ ಮಾಮರದ ಹಕ್ಕಿಗಳಂತೆ
ಭಗವಂತನಂತಿಕದೆ ಅನುರುದ್ಧನಾನಂದ
ನವಶೇಷ ನಿಶೆಯ ಧರ್ಮಕಥಾಪ್ರಸಂಗದಲಿ
ನೂಕುತಿರಲತ್ತ ಭಗವಂತನ ಕಳೇವರದ
ಕೆಲದ[೬೦] ಕಲಧೌತ[೬೧]ದೀಪದ ಮಲ್ಲಿಯಂತವನ
ಕೀರ್ತಿಪ್ರಶಸ್ತಿಯ ಸ್ಫಟಿಕ[೬೨]ಭೂಮಿಕೆಯಂತೆ
ರಜನಿ[೬೩]ತೂಷ್ಣಿಸಲವನ ಧರ್ಮೋಪದೇಶನೆಯ
ಬಿಳಿಯ ನೆನೆವಂತವನ ಮೋಕ್ಷದಾ[೬೪]ಹೆರೆಯ ಹಿಂ
ಬೆಳಕಿನಂತಚಲದಲ ಶಾಂತಿ[೬೫]ದೆಸೆದೀವೆ, ತಾ
ರಾನಿಚಯಮಶ್ರಾವ್ಯ ಸಂಗೀತವಾಚರಿಸೆ[೬೬],
ಪಶ್ಚಿಮ ನಿರಭ್ರ ನಭದಲಿ ದಿಗಂತಕೆ ಮೆಲ್ಲ
ಮೆಲ್ಲನವತರಿ[೬೭]ಸುತಿರ್ದಂಸುಧಾಕಿರಣಂ,



# ಟಿಪ್ಪಣಿ

ವೈಶಾಖಿ— ವೈಶಾಖ ಪೂರ್ಣಿಮಿ.

೧. ಆನಂದನು ಬುದ್ಧನ ಚಿಕ್ಕಪ್ಪನಾದ ಅಮಿತೋದನನ ಮಗ, ಹಾಗೂ ಬುದ್ಧನ ಅಕ್ಕರೆಯ ಶಿಷ್ಯ.

೨. ಬುದ್ಧನ ಕಾಲದಲ್ಲಿ 'ಸೋಳಸ ಮಹಾಜನಪದ'ಗಳೆಂದು ಪ್ರಸಿದ್ಧವಾಗಿದ್ದ ಉತ್ತರಾಪಥದ ೧೬ ದೇಶಗಳಲ್ಲಿ ಒಂದಾದ ಮಲ್ಲರ ಗಣರಾಜ್ಯವು (republic) ಇಬ್ಭಾಗವಾಗಿ ಒಂದರ ರಾಜಧಾನಿ ಪಾವೆಯೂ, ಮತ್ತೊಂದರದು (ಸಂಸ್ಕೃತ) ಕುಶಾವತಿ ಅಥವಾ ಕುಶಿನಗರ ಎಂಬ (ಪಾಲಿ) ಕುಶಿನಾರ ಅಥವಾ ಕುಶಿನಗರವೂ ಆಗಿತ್ತು. ಪಾವೆಯಿಂದ ಕುಶಿನಾರಕ್ಕೆ ಹೆಚ್ಚು ಕಡಿಮೆ ೧೨ ಮೈಲು. ಪಾವೆ ಎಂದರೆ ಈಗಣ ಪಡರವಣಾ (Padraona) ; ಕುಶಿನಾರ ಎಂದರೆ ಗೋರಖಪುರದಿಂದ ೩೭ ಮೈಲು ದೂರದಲ್ಲಿರುವ ಈಗಣ ಕಸಯಾ (Kasia). ಕುಶಿನಾರವು ಅಜಿತವತಿಯೂ ಎಂಬ ಹಿರಣ್ಯವತೀ ನದಿಯ ದಂಡೆಯಲ್ಲಿದೆ.

೩. ಅಮಿತಾಭ, ಭಗವಂತ, ತಥಾಗತ ಸುಗತ, ಗೌತಮ, ಶಾಸ್ತ- ಇವೆಲ್ಲವೂ ಬುದ್ಧನ ಪರ್ಯಾಯನಾಮಗಳು. ೯-೧೦ ನೆಯ ಬಂತಿಗಳಲ್ಲಿ 'ತಥಾಗತರೆ' ಎಂದೂ ೪೯೭ ನೆಯ ಬಂತಿಯಲ್ಲಿ 'ಬುದ್ಧರ' ಎಂದೂ ಬಹುವಚನಿಸಿರುವಲ್ಲಿ ಬುದ್ಧನು ತನ್ನನ್ನೂ ತನ್ನ ಹಿಂದಣ ಹಾಗೂ ಮುಂದಣ ಬುದ್ಧರನ್ನೂ ಕುರಿತಿರುತ್ತಾನೆ.

೪. ಸೂಕರ ಮದ್ದವ ಎಂದರೆ ಕಾಡುಹಂದಿಯ ಒಣಮಾಂಸ (dried boar's flesh) ಎಂದು ಒಮ್ಮೆ ಬಗೆಯಲ್ಪಟ್ಟಿತ್ತಾದರೂ, ಈಚೀಚೆ ಅದು ಮಾಂಸವೇ ಅಲ್ಲ, ಒಂದು ಬಗೆಯ ಅಣಬೆ (fungus), ಅತಏವ ಶಾಕ ಎಂದು ಗೊತ್ತಾಗಿದೆ. (Annals of the Bhandarkar Orieantal Research Iastitute, Silver Jubilee Volume, 1942, pp. 127-133).

೫. ಗಯಾ ಕ್ಷೇತ್ರದ ಬಳಿಯಲ್ಲಿ ಹರಿಯುತ್ತಿರುವ ಫಲ್ಗು ನದಿಯ ಮೇಲ್ಭಾಗದ ಹೆಸರು (ಪಾಲಿ) ನೇರಂಜರೆ— (ಸಂ.) ನಿರಂಜನಾ ಎಂದು. ಅದರ ತಡಿಯಣ (ಪಾ.) ಉರುವೇಲೆ— (ಸಂ.) ಉರುವಿಲ್ವ ಎಂಬ ಈಗಣ ಬುದ್ಧಗಯೆಯಲ್ಲಿಯ ಒಂದು ಅಶ್ವತ್ಥವೃಕ್ಷದ ಬುಡದಲ್ಲಿ ಬುದ್ಧನು ಸಂಬೋಧಿ ಜ್ಞಾನವನ್ನು ಪಡೆದು ಬುದ್ಧನಾದ ೭ ದಿನಗಳವರೆಗೆ ಅತನು ಅಲ್ಲಿಯೇ ಉಳಿದಿದ್ದು ಆ ಮೇಲೆ ಒಂದು ನ್ಯಗ್ರೋಧ ವೃಕ್ಷ (ಆಲದ ಮರ)ದ ಬುಡಕ್ಕೆ ಹೋಗಿ ಅಲ್ಲಿ ೭ ದಿನ ಉಳಕೊಂಡನು.

೬. ಮಾರ ಎಂದರೆ ಬೌದ್ಧಧರ್ಮದ ಪಾಪಪುರುಷ, ಅಥವಾ ಮನಸ್ಸಿನ ವಾಸನೆಗಳ ಮೂರ್ತಿವಂತನಾದ ವ್ಯಕ್ತಿ. ಬುದ್ಧನು ಬೋಧಿಜ್ಞಾನ ಪಡೆಯುತ್ತಲೇ ಅತನಿಗೂ ಮಾರನಿಗೂ ಆದ ಮಾತುಕಥೆಯನ್ನು ಬೌದ್ಧಧರ್ಮಗ್ರಂಥವಾದ ಸುತ್ತನಿಪಾತದ ಪಧಾನ ಸುತ್ತದಲ್ಲಿಯೂ, ಬುದ್ಧನ ಪರಿನಿರ್ವಾಣಕ್ಕೆ ೩ ತಿಂಗಳ ಹಿಂದೆ ಅತನಿಗೂ ಮಾರನಿಗೂ ವೈಶಾಲಿಯಲ್ಲಿ ಆದ ಮಾತುಕಥೆಯನ್ನು ಮಹಾಪರಿನಿಬ್ಬಾನ ಸುತ್ತದಲ್ಲಿಯೂ ವರ್ಣಿಸಿದೆ.

೮. ವೈಶಾಲಿ ಎಂದರೆ 'ಸ್ಗೋಳಸ ಮಹಾಜನಪದ'ಗಳಲ್ಲಿ ಮತ್ತೊಂದಾದ ಲಿಚ್ಛವಿ ಎಂಬ ಜನರ ವಜ್ಜೀ ರಾಜ್ಯದ ರಾಜಧಾನಿ. ಅದು ಈಗಣ ಮುಜಾಫರಪುರ (ತ್ರಿಹೋತ್ರ) ಜಿಲ್ಲೆಯಲ್ಲಿಯ ಬೇಸಾಡ. ಚಾಪಾಲ ಚೈತ್ಯ ಎಂದು ಅಲ್ಲಿದ್ದ ಒಂದು ವಿಹಾರದ ಹೆಸರು.

೯. ಬುದ್ಧನು ಹುಟ್ಟಿದುದು ಕ್ರಿ. ಪೂ. ೫೮೧ ನೆಯ ಮಾರ್ಚಿ ೩೦ ನೆಯ ತಾರೀಖು ಶುಕ್ರವಾರ ವೈಶಾಖ ಹುಣ್ಣಿಮೆಯಂದು, ಪರಿನಿರ್ವಾಣ ಹೊಂದಿದುದು ಕ್ರಿ. ಪೂ. ೫೦೧ ನೆಯ ಏಪ್ರಿಲ್ ೧೫ ನೆಯ ತಾರೀಖು ಕುಜವಾರ ವೈಶಾಖ ಹುಣ್ಣಿಮೆಯಂದು. ಹೀಗೆ ಚಾಂದ್ರಮಾನ ಗಣನದ ಮೇರೆಗೆ ಅತನ ಆಯುಸ್ಸು ಭರ್ತಿ ೮೦ ವರ್ಷ.

೧೦. ನಿರೋಧ ಸಮಾಧಿ ಎಂದರೆ ಬಾಹ್ಯವಸ್ತುವಾವುದನ್ನೂ ಗಮನಿಸದೆ ಮನಸ್ಸನ್ನು ನಿರೋಧಿಸಿ ಧ್ಯಾನದಲ್ಲಿ ಮಗ್ನನಾಗಿರುವಿಕೆ (Withdrawing attention from all externals and entering on and abiding in the objectless concentration of mind.)

೧೧. ಶೀಲ = ಸದಾಚಾರ ; ಸಮಾಧಿ = ಧ್ಯಾನ; ಪ್ರಜ್ಞೆ = ಜ್ಞಾನ ; ವಿಮುಕ್ತಿ ಮೋಕ್ಷ.

೧೨. ಸಂಸ್ಕಾರ-ಭೂತಸೃಷ್ಟಿ, ಜೀವಜಂತುಗಳು; ವ್ಯಯಧರ್ಮ= ಕ್ಷಯ ಶೀಲ, ನಾಶವಂತ.

೧೩. ನಾಗಾವಲೋಕಿಸುತ = ಆನೆಯಂತೆ ಮುಂದರಿಸುತ್ತಿರುವಂತೆ ಹಿಂದಕ್ಕೆ ನೋಡುತ್ತ. ಇದಕ್ಕೆ ಜಾಡಿಕೆಯಾಗಿ ಸಿಂಹಾವಲೋಕನ ಎನ್ನುತ್ತಾರೆ.

೧೪. ಕೇಳಿ = ಸಾಲು, ಸಮೂಹ.

೧೫. (ಪಾ.) ಕಕುತ್ಥಾ ನದಿ = (ಸಂ) ಕಕುತ್ಥಾ ನದಿ ಎಂದರೆ ಕುಶಿನಾರದಿಂದ ೮ ಮೈಲು ದೂರದಲ್ಲಿ ಹರಿಯುತ್ತಿರುವ ಚಿಕ್ಕದೊಂದು ಹೊಳೆ.

೧೬. ಬುದ್ಧನ ಕಾಲದಲ್ಲಿದ್ದ ಕನ್ನಡಿಗಳು ಕಂಚಿನವು, ಗಾಜಿನವಲ್ಲ.

೧೭. ಬೌದ್ಧ ಗ್ರಂಥಗಳಲ್ಲಿ ಬುದ್ಧನನ್ನು ಕುರಿತು ಆಯಾ ಎಡೆಗಳಲ್ಲಿ ಹೆಚ್ಚಾಗಿ ಹೀಗದೆ-'ಅರಹಂ, ಸಮ್ಮಾಸಂಬುದ್ಧೋ, ವಿಜ್ಜಾಚರಣ ಸಂಪನ್ನೋ, ಸುಗತೋ, ಲೋಕವಿದೂ, ಅನುತ್ತರೋ, ಪುರಿಸದಮ್ಮ ಸಾರಥೀ, ಸತ್ಥಾ ದೇವಮನುಸ್ಸಾನಂ, ಬುದ್ಧೋ ಭಗವಾನ್'= ಅರ್ಹಂತನು, ಸಮ್ಯಕ್ಸಂಬುದ್ಧನು, ವಿದ್ಯಾಚರಣ ಸಂಪನ್ನನು, ಸುಗತನು, ಲೋಕವೇತ್ತನು, ಅನುತ್ತರನು (ಅಂದರೆ ಎಲ್ಲರನ್ನು ಮೀರಿದವನು), ಪುರುಷ ದಮ್ಯಸಾರಥಿ (ಅಂದರೆ ದಾರಿತಪ್ಪಿ ನಡೆಯುವವರ ಹೃದಯಗಳನ್ನು ಹಿಂದಕ್ಕೆ ಎಳಕೊಂಡು ಸಾರಥಿಯಂತೆ ನಡಸುವಾತನು, ಅಥವಾ ದಮನವನ್ನು ಬಯಸುವ ಜನರನ್ನು ಸಾರಥಿಯಂತೆ ನಡಸಬಲ್ಲವನು), ದೇವತೆಗಳ ಹಾಗೂ ಮನುಷ್ಯರ ಗುರು, ಬುದ್ಧನು ಭಗವಂತನು.

೧೮. ಇಲ್ಲಿ (ಬಂತಿ ೧೭೪ ರಿಂದ ೩೦೪ ರ ವರೆಗೆ ಬೌದ್ಧ ಧರ್ಮಗ್ರಂಥವಾದ ಸುತ್ತನಿಪಾತದ ಮಹಾಮಂಗಲಸುತ್ತವನ್ನು ಬುದ್ಧನಿಂದ ಪುಕ್ಕುಸನಿಗೆ ಉಪದೇಶ ಮಾಡಿಸಿದೆ. ಮಹಾಪರಿನಿಬ್ಬಾನಸುತ್ತದ ಈ ಎಡೆಯಲ್ಲಿ ಈ ಉಪದೇಶವಿಲ್ಲ.

೧೯. ಈ ನಾಲ್ಕು ಆರ್ಯಸತ್ಯಗಳನ್ನು ಈ ಕಾವ್ಯದಲ್ಲಿ ಮುಂದೆ ೫೫೮/೫೭೩

ನೆಯ ಬಂತಿಗಳಲ್ಲಿ ವಿವರಿಸಿದೆ.

೨೦. ನಿರ್ವಾಣಪದಪರೋಕ್ಷಾನುಭವ = ನಿರ್ವಾಣವನ್ನು ಸಾಕ್ಷಾತ್ಕರಿಸಿಕೊಳ್ಳುವಿಕೆ.

೨೧. ನಿರುಪಧಿಶೇಷ ನಿರ್ವಾಣ (ಪಾಲಿ)= (ಸಂಸ್ಕೃತ, ನಿರುಪಾಧಿಶೇಷ ನಿರ್ವಾಣ) ಏನನ್ನೂ ಹಿಂದುಳಿಸದೆ ನಂದಿಹೋಗುವಿಕೆ (utter passing away leaving nothing whatever to remain), ಅಂದರೆ ಪರಿನಿರ್ವಾಣ.

೨೨. ಕಾಲಿನ ಮೇಲೆ ಕಾಲಿಕ್ಕಿ ಮಾಡುವ ಶಯನಕ್ಕೆ ಸಿಂಹಶಯ್ಯೆ ಎನ್ನುತ್ತಾರೆ.

೨೩. ಪಿಂಡಪಾತ = ಭಿಕ್ಷಾಪಾತ್ರದಲ್ಲಿ ದೊರೆತ ಅನ್ನ.

೨೪. ಉದಾನ = ಸಂತೋಷದಿಂದ ಮನಉಕ್ಕಿ ಹಾಡುವ ಹಾಡು; ಉದಾನಿಸಿದ = ಹರ್ಷಗೀತವನ್ನು ಹಾಡಿದನು.

೨೫. ಧರ್ಮಾನುಧರ್ಮ = ಗುರುತರವೂ ಲಘುತರವೂ ಆದ ಧರ್ಮ = (ಕರ್ತವ್ಯ) ಗಳು.

೨೬. ಬುದ್ಧನು ಹುಟ್ಟಿದುದು ತನ್ನ ತಂದೆ ಶುದ್ಧೋದನನ ರಾಜಧಾನಿಯಾಗಿದ್ದ ಕಪಿಲವಸ್ತುವಿನ ಬಳಿಯ ಲುಂಬಿನೀವನದಲ್ಲಿ (ಇದೀಗ ನೇಪಾಳದ ತರಾಯಿಯಲ್ಲಿ ಭಗವಾನಪುರದಿಂದ ೨ ಮೈಲು ದೂರದಲ್ಲಿರುವ ರುಮ್ಮೆಂಡೈ. Rummendei, ಎಂಬ ಹಳ್ಳಿ) ; ಆತನು ಸಂಬೋಧಿ ಜ್ಞಾನವನ್ನು ಹೊಂದಿ ಬುದ್ಧನಾದುದು (ಬಂ. ೧೪ ಟಿಪ್ಪಣಿ ೫) ಗಯೆಯಿಂದ ೭ ಮೈಲು ದೂರದಲ್ಲಿರುವ ಉರುವೇಲೆ ಎಂಬ ಈಗಣ ಬುದ್ಧಗಯೆಯಲ್ಲಿ ; ಆತನು ಮೊತ್ತನೊದಲಲ್ಲಿ ತನ್ನ ಧರ್ಮಚಕ್ರವನ್ನು ಪ್ರದರ್ಶಿಸಿದುದು, ಅಂದರೆ, ತನ್ನ ಧರ್ಮವನ್ನು ಪ್ರಥಮತಃ ಸಾರಿದುದು, ವಾರಣಾಸಿ (= ಕಾಶಿ)ಯ ಬಳಿಯ ಋಷಿಪತ್ತನವೂ ಮೃಗದಾವವೂ ಎಂಬ ಈಗಣ ಸಾರನಾಥದಲ್ಲಿ ; ಆತನು ಪರಿನಿರ್ವಾಣ ಹೊಂದಿದುದು ಕುಶಿನಾರದ (ಸಾಲವನದ)ಲ್ಲಿ.

೨೭. ಚಾರಿಕ= ಯಾತ್ರೆ.

೨೮. ಕಪಿಶೀರ್ಷ= ಬಾಗಿಲಿನ ಮೇಲಣ ಹಾಸುಮರ, ದ್ವಾರೋರ್ಧ್ವದಾರು.

೨೯. ಪತ್ತ-ಚೀವರ= ಭಿಕ್ಷಾಪಾತ್ರ (ಪತ್ತ= ಸಂ. ಪಾತ್ರ) ಮತ್ತು ಭಿಕ್ಷುವಿನ (ಕಾವಿಯ) ಶಾಟಿ (ಚೀವ).

೩೦. ಅನಾಸ್ರವ = ನಿಷ್ಪಾಪ, ಅನಘ, ವೀತರಾಗ.

೩೧. 'ಸೋಳಸ ಮಹಾಜನಪದ'ಗಳಲ್ಲಿಯ (ಮಹಾಭಾರತದ ಕರ್ಣನ ರಾಜ್ಯವಾಗಿದ್ದ ಅಂಗದೇಶದ ರಾಜಧಾನಿಯಾದ ಚಂಪೆ, ಅಂದರೆ ಈಗಣ ಭಗಲಪುರದಿಂದ ೪ ಮೈಲು ದೂರದಲ್ಲಿರುವ ಚಂಪಾನಗರ ; ಮಗಧದೇಶದ ರಾಜಧಾನಿಯಾದ ರಾಜಗೃಹ ಅಂದರೆ ಈಗ ಬಿಹಾರದಲ್ಲಿರುವ ರಾಜಗಿರ (ಇದೇ ಮಹಾಭಾರತದಲ್ಲಿ ಜರಾಸಂಧನ ರಾಜಧಾನಿ ಎಂದಿರುವ ಗಿರಿವ್ರಜ ;) ಕೋಸಲ ದೇಶದ ರಾಜಧಾನಿಯಾದ ಶ್ರಾವಸ್ತಿ, ಅಂದರೆ ಅಯೋಧ್ಯೆಯಿಂದ ೫೮ ಮೈಲು ದೂರದಲ್ಲಿರುವ ಈಗಣ ಸಾಹೇತ-ಮಾಹೇತ ; ಕೋಸಲದೇಶದಲ್ಲಿಯದೇ ಇನ್ನೊಂದು ನಗರವಾದ ಸಾಕೇತ ಅಂದರೆ ಈಗಣ ಅಯೋಧ್ಯೆ; ವತ್ಸದೇಶದ ರಾಜಧಾನಿಯಾದ ಕೌಶಾಂಬಿ, ಅಂದರೆ ಪ್ರಯಾಗದಿಂದ ೩೦ ಮೈಲು ದೂರದಲ್ಲಿರುವ ಈಗಣ ಕೋಸಂ ಅಥವಾ ಕೋಸಂಬಿ ನಗರ ; ಕಾಶೀ ದೇಶದ ರಾಜಧಾನಿಯಾದ ವಾರಣಾಸಿ ಅಂದರೆ ಈಗಿನ ಕಾಶಿ.

೭. ಪರಿನಿರ್ವೃತಿಸು=ಪರಿನಿರ್ವಾಣ ಹೊಂದು.

೩೨. ಮಹಾಸುದರ್ಶನನೆಂಬ ಚಕ್ರವರ್ತಿಯನ್ನು ಕುರಿತು ಬೌದ್ಧರ ದೀಘ ನಿಕಾಯದ ಮಹಾಸುದಸ್ಸನ ಸುತ್ತದಲ್ಲಿ ವಿಸ್ತಾರವಾಗಿ ಹೇಳಿದೆ, ಹಾಗೂ ಬುದ್ಧನು ತನ್ನದೊಂದು ಪೂರ್ವಜನ್ಮದಲ್ಲಿ ಆ ಚಕ್ರವರ್ತಿಯಾಗಿದ್ದನೆಂದು ಮಹಾಸುದಸ್ಸನ ಜಾತಕದಲ್ಲಿ ಹೇಳಿದೆ.

೩೩. ಯಕ್ಷರಾಜನಾದ ಕುಬೇರನ ರಾಜಧಾನಿಯಾಗಿ ಯಕ್ಷಧಾನಿ ಎನಿಸುವ ಅಳಕಾವತಿಯನ್ನು ಬೌದ್ಧಸಾಹಿತ್ಯದಲ್ಲಿ ಅಳಕಮಂದ ಎನ್ನುತ್ತಾರೆ.

೩೪. ಸಂಸ್ಥಾಗಾರ=ಸಭಾಗೃಹ, ನಗರಭವನ.

೩೫. ಈ ಮಲ್ಲರನ್ನು 'ವಾಸಿಷ್ಠರೆ' ಎಂದು ಸಂಬೋಧಿಸಿರುವುದರಿಂದ, ಅವರು ವಸಿಷ್ಠ ಗೋತ್ರದವರೆಂದು, ಆತಏವ ಕ್ಷತ್ರಿಯರೆಂದು ತಿಳಿಯುತ್ತದೆ.

೩೬. ಬುದ್ಧನು ಆದಿತ್ಯಗೋತ್ರದವನು, ಅಂದರೆ ಸೂರ್ಯವಂಶೋತ್ಪನ್ನನು ಎಂಬ ಕಾರಣ ಆತನಿಗೆ ಆದಿತ್ಯಬಂದು ಎಂದು ಹೆಸರಿದೆ ; ಉದಾ—

(೧) ಮಗಧ ದೇಶದ ಅರಸನಾದ ಬಿಂಬಸಾರನೊಡನೆ ಬುದ್ಧನು ತನ್ನನ್ನು ಕುರಿತು ಹೀಗೆನ್ನುತ್ತಾನೆ (ಸುತ್ತನಿಪಾತದ ಪಬ್ಬಜ್ಜಾ ಸುತ್ತ)

ಆದಿಚ್ಚಾ ನಾಮ ಗೊತ್ತೇನ ಸಾಕಿಯಾ ನಾಮ ಜಾತಿಯಾ !
ತಮ್ಹಾ ಕುಲಾ ಪಬ್ಬಜಿತೋ (Sಮ್ಹಿ ರಾಜ) ನ ಕಾಮೇ ಅಭಿಪತ್ಥಯಂ
॥೧೯॥

ಅಂದರೆ ಎಲೈ ಅರಸನೆ, ಆದಿತ್ಯ ಗೋತ್ರದವರೂ ಜಾತಿಯಿಂದ ಶಾಕ್ಯರೂ ಆದವರ ಕುಲದಿಂದ ಕಾಮೋಪಭೋಗದ ಇಚ್ಛೆಯನ್ನು ನೀಗಿ ನಾನು ಪರಿವ್ರಾಜಕನಾಗಿರುತ್ತೇನೆ. ಸುತ್ತನಿಪಾತದಲ್ಲಿ ಇತರತ್ರವೂ ಬುದ್ಧನ ಆದಿತ್ಯಬಂಧು ಎಂದು ಹೆಸರು ದೊರೆಯುತ್ತದೆ-ಖಗ್ಗವಿಸಾಣಸುತ್ತ ೨೦ ; ಸಭಿಯಸುತ್ತ ೩೧ ; ತುವಟ್ಟಕ ಸುತ್ತ ೧ ; ಪಾರಾಯಣ ಸುತ್ತ ೫.

೨) ಅಶ್ವಘೋಷನ 'ಬುದ್ಧ ಚರಿತ'ದಲ್ಲಿ (ಸರ್ಗ ೧) ಬುದ್ಧನ ತಂದೆಯಾದ ಶುದ್ಧೋದನನನ್ನು 'ಅರ್ಕಬಂಧು' ಎಂದದೆ—

ಶುದ್ಧೋದನನೋ ನಾಮ ನಪೋಽರ್ಕಬಂಧುಃ ॥೯॥

(೩) ಅಮರಕೋಶದಲ್ಲಿ (1.೧) ಬುದ್ಧನನ್ನು 'ಅರ್ಕಬಂಧು' ಎಂದದೆ-

ಸ ಶಾಕ್ಯಸಿಂಹಃ ಸರ್ವಾರ್ಥಸಿದ್ಧಃ ಶೌದ್ಧೋದನಿಶ್ಚ ಸಃ ।
ಗೌತಮಶ್ಚಾರ್ಕಬಂಧುಶ್ಚ ಮಾಯಾದೇವೀಸುತಶ್ಚ ಸಃ ॥೧೫॥

೩೭. 'Light of Asia' V. ಬಂ. ೧೮೮-೧೯೬.

೩೮. ಇಲ್ಲಿ ೪೪೬ ರಿಂದ ೪೯೧ ರ ವರೆಗಿನ ಬಂತಿಗಳಲ್ಲಿ (೪೭೪ ರಿಂದ ೪೮೭ ರ ವರೆಗಳ ಬಂತಿಗಳು ವಿನಾ) ಬೌದ್ಧಸಾಹಿತ್ಯದ ಧಮ್ಮಪದವೇ ಮೊದಲಾದ ಗ್ರಂಥಗಳಿಂದ ಆಯ್ದುಕೊಂಡ ಸೂಕ್ತಿಗಳನ್ನು ಬುದ್ಧನಿಂದ ಈ ಮಲ್ಲರಿಗೆ ಉಪದೇಶ ಮಾಡಿಸಿದೆ. ಮಹಾಪರಿನಿಬ್ಬಾನ ಸುತ್ತದಲ್ಲಿ ಈ ಎಡೆಯಲ್ಲಿ ಈ ಮಾತುಗಳಿಲ್ಲ,

೩೯, ವೀರಸೂ=ವೀರರ ತಾಯಿ.

೪೦. ಬಂ. ೪೮೫-೪೮೬ : To every action there is an equal and opposite reaction.

೪೧. (೧) ಪೂರ್ಣಕಶ್ಯಪ, (೨) ಮಸ್ಕರೀ ಗೋಶಾಲ, (೩) ಅಜಿತ ಕೇಶ ಕಂಬಲಿ, (೪) ಪಕುಧ ಕಾತ್ಯಾಯನ, (೫) ಬೇಲಟ್ಠೀಪುತ್ರ ಸಂಜಯ ಹಾಗೂ (೬) ನಿರ್ಗ್ರಂಥಜ್ಞಾತಪುತ್ರ ಎಂಬ ಈ ಎಂಬ ಈ ಆರುವರು ಹೆಚ್ಚು ಕಡಿಮೆ ಬುದ್ಧನ ಸಮಕಾಲದಲ್ಲಿ ಪ್ರಸಿದ್ಧರಾಗಿದ್ದ ತೀರ್ಥ (ಂ) ಕರರು, ಅಂದರೆ ಆಯಾ ಧರ್ಮಬೋಧ ಕರು. ಇವರಲ್ಲಿ ನಿರ್ಗ್ರಂಥಜಾತಪುತ್ರನೆಂದರೆ ಜೈನರ ೨೪ ನೆಯ ತೀರ್ಥಂಕರನಾದ ವರ್ಧಮಾನ-ಮಹಾವೀರ. ಬೌದ್ಧಗ್ರಂಥಗಳಲ್ಲಿ ಇವರನ್ನು ಹೆಸರಿಸಿರುವಲ್ಲಿ ಇವರನ್ನು ಕುರಿತು ಹೀಗಂದಿದೆ-—'ಸಮಣ ಬ್ರಾಹ್ಮಣಾ, ಸಂಘಿನೋ, ಗಣಿನೋ, ಗಣಾಚಾರಿಯಾ, ಞಾತಾ, ಯಸಸ್ಸಿನೋ, ತಿತ್ಥಕರಾ, ಸಾಧುಸಮ್ಮತಾ ಬಹುಜನಸ್ಸ'=ಶ್ರಮಣ (ರಾಗಿ) ಬ್ರಾಹ್ಮಣ (ರಾದವ) ರು, ಸಂಘದಿಂದ ಒಡಗೂಡಿದವರು, ಗಣದಿಂದ ಒಡಗೂಡಿದವರು, ಗಣಾಚಾರ್ಯರು, ಲೋಕವಿಜ್ಞಾತರು, ಯಶಸ್ವಿಗಳು, ತೀರ್ಥ (ಂ) ಕರರು, ಸಾಧು ಗಳೆಂದು ಬಹುಜನರಿಂದ ಸಮ್ಮತಿಸಲ್ಪಟ್ಟವರು.

೪೨. ಭದಂತ ಎಂಬುದು ಬೌದ್ಧಶ್ರಮಣರನ್ನು ಸಂಬೋಧಿಸುವಲ್ಲಿ ಉಪಯೋಗಿ ಸುವ ಮಂತ್ರಣ ಪದ.

೪೩. ಇಲ್ಲಿ ೫೪೭ ರಿಂದ ೫೭೫ ರ ರ ವರೆಗಣ ಬಂತಿಗಳಲ್ಲಿ ಅಂಗುತ್ತರ ನಿಕಾಯದ ಧಮ್ಮಚಕ್ಕಪ್ಪವತ್ತನ (ಧರ್ಮಚಕ್ರಪ್ರವರ್ತನ) ಸುತ್ತವನ್ನು ಸಂಗ್ರಹಿಸಿ ಬುದ್ಧನಿಂದ ಸುಭದ್ರನಿಗೆ ಬೋಧಿಸಿಯದೆ. ಮಹಾಪರಿನಿಬ್ಬಾನ ಸುತ್ತದಲ್ಲಿ ಈ ಎಡೆಯಲ್ಲಿ ಈ ಭಾಗವಿಲ್ಲ.

೪೪. ಉಪಶಮ=ಚಿತ್ತ ನಿವೃತ್ತಿ; ಅಭಿಜ್ಞೆ=ಉಚ್ಚವಾದ ಪ್ರಜ್ಞೆ; ಸಂಬೋಧ=ಪರಮ ಪ್ರಬೋಧನ (ಕೇವಲ ಜ್ಞಾನ) ; ನಿರ್ವಾಣ=ವಿಮುಕ್ತಿ.

೪೫. (೧) ಸಮ್ಯಗ್ದೃಷ್ಟಿ=ನೇರಾದ ಕಾಣಿಕೆ ಅಥವಾ ನೇರಾದ ನಂಬುಗೆ (Right veiw, or right belief) ; (೨) ಸಮ್ಯಕ್ಸಂಕಲ್ಪ=ನೇರಾದ ಬಗೆತ (Right resolve) ; (೩) ಸಮ್ಯಗ್ವಚನ=ನೇರಾದ ನುಡಿತ (Right speech); (೪) ಸಮ್ಯಕ್ಕರ್ಮ=ನೇರಾದ ನಡೆತ (Right conduct); (೫) ಸಮ್ಯಗಾಜೀವ =ನೇರಾದ ಬದುಕು (Right livelihood) ; (೬) ಸಮ್ಯಗ್ವ್ಯಾಯಾಮ= ನೇರಾದ ದುಡಿತ (Right effort); (೭) ಸಮ್ಯಕ್ಸ್ಮೃತಿ=ನೇರಾದ ಎಚ್ಚರಿಕೆ ಅಥವಾ ನೇರಾದ ನೆನವರಿಕೆ (Right mindfulness, or right recollection) ; ಮತ್ತು (೮) ಸಮ್ಯಕ್ಸಮಾಧಿ=ನೇರಾದ ಧ್ಯಾನ (Right contemplation). ಇವು ಆರ್ಯ ಅಷ್ಟಾಂಗಿಕ ಮಾರ್ಗದ ಎಂಟು ಅಂಗಗಳು.

೪೬. ಗೋಳಿ=ಆಲದ ಮರ.

೪೭. ಅನ್ಯತೀರ್ಥಕ=ಇತರ ಧರ್ಮದ ಅನುಯಾಯಿ, ಪರಸಮಯಿ.

೪೮. ಸ್ರೋತಾಪನ್ನ=ಹಳ್ಳದಲ್ಲಿ ಇಳಿದವನು, ಅಂದರೆ ನಿರ್ವಾಣ ಮಾರ್ಗದ ನಾಲ್ಕು ಮೆಟ್ಟಲಲ್ಲಿ ಮೊದಲನೆಯದನ್ನು ದಾಟಿದವನು.

೪೯. ಹಂಸಗೀತ=ಕೊನೆಯ ಹಾಡು (Swan Song).

೫೦. ಪ್ರಥಮ ಧ್ಯಾನ, ದ್ವಿತೀಯ ಧ್ಯಾನ, ತೃತೀಯ ಧ್ಯಾನ ಹಾಗೂ ಚತುರ್ಥ ಧ್ಯಾನ ಎಂಬುವು ಸಮಾಧಿಯಲ್ಲಿ ಒಂದಕ್ಕಿಂತ ಒಂದು ಮೇಲಾದ ೪ ಸೋಪಾನಗಳು.

೫೧. ವಿವಿಧಾಯತನಗಳೆಂದರೆ ಅನುಕ್ರಮವಾಗಿ ಸಮಾಧಿಯ ಈ ೪ ಅವಸ್ಥೆಗಳು (೧) ಅನಂತ್ಯವಾದ ಆಕಾಶದ ಆಯತನ=ಮನಸ್ಸಿಗೆ ಅನಂತವಾದ ಅಂತರಿಕ್ಷ ಮಾತ್ರವೇ ಇದ್ದಿರುವಂತೆ ಬೋಧೆಯಾಗುವ ಅವಸ್ಥೆ (the state of mind of which the infinity of space is alone present ; the abode of infinity of space) ; (2) ಅನಂತ್ಯವಾದ ವಿಜ್ಞಾನದ ಆಯತನ=ಮನಸ್ಸಿಗೆ ಅನಂತವಾದ ಚೇತನ ಮಾತ್ರವೇ ಬೋಧೆಯಾಗುವ ಅವಸ್ಥೆ (the state of mind to which the infinity of thought is alone present ; the abode of infinity of consciousness)! ಅನಂತ್ಯವಾದ ಆಕಿಂಚನ್ಯದ ಆಯತನ=ಮನಸ್ಸಿಗೆ ಏನೂ ಇಲ್ಲದಿರುವಂತೆ ಭೋಧೆಯಾಗುವ, ಅಂದರೆ ಮನಸ್ಸು ವೃತ್ತಿಶೂನ್ಯವಾಗುವ ಅವಸ್ಥೆ (the state of mind to which nothing at all is specially present ; the abode of nothingness ;) (೪) ನೈವಸಂಜ್ಞೆಯ ನಾಸಂಜ್ಞೆಯ ಆಯತನ=ಚೇತನಾಚೇತನಗಳ ನಡುವಣ ಮಾನಸಿಕ ಅವಸ್ಥೆ, ಇದು ಸಮಾಧಿಯ ಕೊನೆಯ ಮೆಟ್ಟಲು (the state between consciousness and unconsciousness, or between perception and non-perception).

೨. ಸಂಜ್ಞಾನಿರೋಧ=ಭಾವನೆಯ ಹಾಗೂ ಚೇತನೆ (ಸಂಜ್ಞೆ) ಯ ಜ್ಞಾನ ತೀರ ಅಳಿದು ಹೋದ ಮಾನಸಿಕ ಅವಸ್ಥೆ (a state in which the consciousness both of sensations and of ideas had wholly passed away).

೫೩. ಅನುರುದ್ಧನು ಬುದ್ಧನ ಮತ್ತೊಬ್ಬ ಕಕ್ಕನಾದ ಶುಕ್ಲೋದನನ ಮಗ. ಅವನೂ ಭಿಕ್ಷುವಾಗಿದ್ದನು.

೫೪. ಕದಲಿಕೆ=ಬಾಳೆಯ ತೋಟ.

೫೫. ಸನಾತನ ಧರ್ಮದ ಬ್ರಹ್ಮನನ್ನು ಬ್ರಹ್ಮಸಹಂಪತಿ ಎಂದೂ ದೇವೇಂದ್ರನನ್ನು ದೇವೇಂದ್ರ ಶಕ್ರನೆಂದೂ ಬೌದ್ಧಸಾಹಿತ್ಯದಲ್ಲಿ ಅಲ್ಲಲ್ಲಿ ಉಲ್ಲೇಖಿಸಿದೆ.

೫೬. ಸಮುಚ್ಛ್ರಯ=ಪ್ರತ್ಯೇಕ ಜೀವಿಯ ಅಸ್ತಿತ್ವ, ರೂಪ, ದೇಹ.

೫೭. ಉತ್ಪಾದವ್ಯಯಧರ್ಮಿಯಾಗಿ=ಜನನ ಮರಣಗಳಿಗೆ ಈಡಾಗಿ (ಉತ್ಪಾದ =ಜನನ ; ವ್ಯಯ=ಮರಣ.)

೫೮. ಉಪಶಮ=ಕೊನೆವರಿಸುವಿಕೆ ; ಸಂಸ್ಕಾರದ ಉಪಶಮ=ಜೀವಿತದ ವಿರಾಮ, ಬದುಕಿನ ಕೊನೆವರಿಕೆ (cessation of existence).

೫೯. ಅನೇಜ=ಅಶೀಹಮಾನ, ನಿಷ್ಕಾಮ.

೬೦. ಕಲಧೌತ=ಬೆಳ್ಳಿ.

೬೧. ದೀಪದ ಮಲ್ಲಿ=ಕೈಯ್ಗಳಲ್ಲಿ ದೀಪಪಾತ್ರವನ್ನು ಹಿಡಿದಿರುವ (ಹೆಚ್ಚಾಗಿ)

ದೇವಾಲಯಗಳಲ್ಲಿರುವ) ಲೋಹದ ಅಥವಾ ಕಲ್ಲಿನ ಸ್ತ್ರೀ ಮೂರ್ತಿ.

೬೨. ಭೂಮಿಕೆ = ಶಾಸನ ಮುಂತಾದುವನ್ನು ಕೆತ್ತುವ ಶಿಲಾಫಲಕ.

೬೩. ತೂಷ್ಣೀಸು = ಮೌನವಾಗಿರು.

೬೪. ಹೆರೆಯ ಹಿಂಬೆಳಕು = ಚಂದ್ರನು ಅಸ್ತಮಿಸುತ್ತಲೆ ಆಕಾಶದಲ್ಲಿ ತೋರುವ ಬೆಳಕು.

೬೫ ಅಚಲದಲ ಶಾಂತಿ = ಒಂದು ಎಲೆಯಾದರೂ ಕದಲದಂಥಾ ನಿಃಶಬ್ದವಾದ ಶಾಂತಿ.

೬೬. ನಕ್ಷತ್ರಗಳು ಹಾಡುತ್ತವೆ ಎಂದು ಒಂದು ನಂಬಿಕೆ (Shakespeare : Merchant of Venice, V. I ಬಂ. ೬೦-೬೧).

೬೭. ಅವತರಿಸುತಿರ್ದಂ = ಇಳಿಯುತ್ತಿದ್ದನು.



